ಶ್ರೀ ಶಂಕರೋ ವಿಜಯತೇ

# ಅದ್ವಿತೀಯ ಆಚಾರ್ಯ

# ಶ್ರೀ ಶಂಕರಾಚಾರ್ಯ

ಲೇ ಖ ಕ ರು :

ಕೋಟ ವಾಸುದೇವಕಾರಂತ.




ಪ್ರಕಾಶಕರು :

ನಾರಾಯಣದೇವರಕೆರಿ ಶ್ರೀಶಂಕರಜಯಂತೀ
ಸಭಾ ಕಾರ್ಯದರ್ಶಿ:
-19/235, ತೇರುಬೀದಿ,
ಪೋಸ್ಟ್ - ಹೊ ಸ ಪೇ ಟೆ .

## ಅನುಕ್ರಮಣಿಕೆ.

# ಅದ್ವಿತೀಯ ಆಚಾರ್ಯ ಶ್ರೀ ಶಂಕರಾಚಾರ್ಯರು

## ೧. ಅದ್ವೈತ ತತ್ವದ ಜ್ಞಾನದ ಹಿರಿಮೆ.

ಈ ಪುಸ್ತಕವನ್ನು ಬರೆದಿದ್ದು ಮುಖ್ಯವಾಗಿ ಅದ್ವೈತ ಸಂಪ್ರದಾಯದವರನ್ನು ಉದ್ದೇಶಿಸಿಯಾಗಿದೆ. ಅವರನ್ನು ಮೂರು ವರ್ಗ ಮಾಡಬಹುದು ಅದ್ವೈತತತ್ವವನ್ನು ಚೆನ್ನಾಗಿ ಅರ್ಥಮಾಡಿಕೊಂಡು, ವಿವೇಕ ವೈರಾಗ್ಯಗಳನ್ನು ಬೆಳೆಸಿ, ಈ ಜನ್ಮದಲ್ಲೇ ಅದರ ಅನುಭವಕ್ಕಾಗಿ ಯತ್ನ ನಡೆಸುವ ಪ್ರಥಮ ವರ್ಗದವರು. ಇಂಥವರು ತೀರಾ ಅಪರೂಪ. ಎರಡನೆಯ ವರ್ಗದವರೆಂದರೆ ಬುದ್ಧಿಯ ಮಟ್ಟದಲ್ಲಾದರೂ ಅದ್ವೈತತತ್ವವನ್ನು ತಿಳಕೊಳ್ಳುವ ಯತ್ನ ಮಾಡುತ್ತಿರುವವರು. ಕೆಲವು ದೊಡ್ಡ ಪಟ್ಟಣಗಳಲ್ಲೀಗ ಅದ್ವೈತತತ್ವವನ್ನು ಈ ಕಾಲದವರ ಮನೋಭಾವನೆಗೆ ಒಗ್ಗುವಂತೆ ಸುಲಭ ಮಾಡಿ, ಅತ್ಯಂತ ಸಮರ್ಥತೆಯಿಂದ ವಿವರಿಸುವ ಉಪನ್ಯಾಸಕರು ಬರುತ್ತಿರುತ್ತಾರೆ. ಇಂಗ್ಲಿಷ್ ಬಲ್ಲ ಶ್ರೀ ರಾಮಕೃಷ್ಣ ಮಠ ಮುಂತಾದವುಗಳ ಮೇಧಾವೀ ಸನ್ಯಾಸಿಗಳೂ, ಹಿಂದೂ ತತ್ವಜ್ಞಾನದ ಪ್ರಾಧ್ಯಾಪಕರು ಕೆಲವರೂ, ಆಗಾಗ ಈ ತತ್ವದ ಅನೇಕ ಉತ್ತಮತರದ ಪ್ರತಿಪಾದನೆಗಳನ್ನು ಮಾಡಿ, ಅದ್ವೈತ ತತ್ವದ ಪರಿಚಯವು ಈ ಎರಡನೆಯ ವರ್ಗದವರಿಗೆ ಕೆಲವುಮಟ್ಟಿಗೆ ಸಿಕ್ಕುವಂತೆ ಮಾಡುತ್ತಿದ್ದಾರೆ ಆದರೆ ಕೇವಲ ಬುದ್ಧಿಯ ಮಟ್ಟದಲ್ಲಿ ಈ ತತ್ವ ಕಲಿಯುತ್ತಿರುವ ಈ ವರ್ಗದವರ ಕೊರತೆ ಯೇನೆಂದರೆ; ಚಿತ್ತಶುದ್ಧಿಗೆ ಬೇಕಾದ ಶಾಸ್ತ್ರೀಯ ಸಾಧನಗಳ ಅಭಾವದಿಂದ ಅವರು ಈ ತತ್ವದ ಸಾಧನಾಮಟ್ಟಕ್ಕೆ ಮುಂದರಿಯಲಾರದವರಾಗಿ, ಕೇವಲ ಇದ್ದ ಕ್ಲಾಸಿನಲ್ಲೇ 10, 20 ವರ್ಷ ಉಳಕೊಂಡಂಥ ವಿದ್ಯಾರ್ಥಿಯ ಶೋಚನೀಯ ಅವಸ್ಥೆಯಲ್ಲಿದ್ದಾರೆ. ಆದರೂ ಅವರು ಮೂರನೆ ಮಟ್ಟದವರಿಗಿಂತ ಹೆಚ್ಚಿನ ಅದ್ವೈತಿಗಳಾಗಿದ್ದಾರೆ.

ಈ ಕಡೆಯ ವರ್ಗದ ಅದ್ವೈತಿಗಳೆಂದರೆ ಕೇವಲ ಹುಟ್ಟಿಂದಮಾತ್ರ ಅಸಂಪ್ರದಾಯದವರಾಗಿದ್ದು ಅದ್ವೈತತತ್ವದ ವಿಚಾರವಾಗಿ ತಿಳಿಯಲು ಏನೂ ಯತ್ನಮಾಡಿದವರು. ಇಂಗ್ಲಿಷ್ ಭಾಷೆಯ ಪರಿಚಯವಾಗಲಿ ಸಂಸ್ಕೃತದ ಪರಿಚಯವಾಗಲಿ ಇಲ್ಲದಿದ್ದು, ಮುಖ್ಯವಾಗಿ ಹಳ್ಳಿಗಳಲ್ಲಿರುವ ಈ ವರ್ಗದವರಿಗೆ, ಅವರನ್ನು ಅದ್ವೈತ ತತ್ವಕ್ಕೆ ಆಕರ್ಷಿಸಿ ಅವರ ಅಭಿರುಚಿ ಕೆರಳಿಸುವ ಭಾಷಣ ಮಾಡುವವರು ಸಿಕ್ಕುವದು ದುರ್ಲಭ. ಅಥವಾ ಅಂಥ ಸಮರ್ಥರ ಲೇಖನಗಳೂ ಈಗ ಕನ್ನಡದಲ್ಲಿ ಸಿಕ್ಕುವುದು ಅಪರೂಪ. ಪತ್ರಿಕೆಗಳಲ್ಲಿ ಅವರು ಶ್ರೀಶಂಕರಾಚಾರ್ಯರ ಜೀವನ ಚರಿತ್ರೆಯನ್ನು ಖಂಡಿತ ಓದಿರಬಹುದು. ಆದರೆ ಆ ಪತ್ರಿಕೆಗಳಲ್ಲೇ ಅವರು ಅಪಾರಮಟ್ಟದಲ್ಲಿ ಅನೇಕಾನೇಕ ತೀರಾ ಸಾಮಾನ್ಯ ವಿಚಾರಗಳೊಡನೆ ಶ್ರೀ ಶಂಕರಾಚಾರ್ಯರ

ಜೀವನ ಚರಿತ್ರೆ. ಅಂತೆಯೇ ಇತರ ಆಚಾರ್ಯರ ಚರಿತ್ರೆ, ಓದಿರುವುದರಿಂದ ಅವರಿಗೆ ಶ್ರೀ ಶಂಕರಾಚಾರ್ಯರ ಅದ್ಭುತ ಹಿರಿಮೆಯನ್ನು ತಿಳಕೊಂಡು, ಅದರಿಂದಾಗಿ ಅದ್ವೈತತತ್ವವನ್ನು ತಿಳಕೊಳ್ಳಲೇಬೇಕೆಂಬ ಹುರುಪು ಬಹುಮಟ್ಟಿಗೆ ಉಂಟಾಗಿರಲಾರದು. ಅಂತೆಯೇ ಅದ್ವೈತ ಸಂಪ್ರದಾಯದ ಬಾಲಕರು ಹೇಗೂ ಈ ಭಾಗದಲ್ಲಿ ಮೂಢರೇ ಆಗಿರುತ್ತಾರೆ. ನಿಜಕ್ಕೂ ಈ ಎರಡು ಪಂಗಡದವರೂ ಅದ್ವೈತತತ್ವದ ಮಟ್ಟಿಗೆ ಕೇವಲ ಬಾಲಕರೇ ಸರಿ.

ಆದರೆ ನನಗೊಂದು ಆಸೆಇತ್ತು. ಈ ಮೂರನೇ ವರ್ಗದವರನ್ನೇ ಉದ್ದೇಶಿಸಿ, ಶ್ರೀ ಶಂಕರಾಚಾರ್ಯರ ಜೀವನದ ಅತಿವಿಶೇಷ ಮಟ್ಟದ ವಿಷಯಗಳ ಮಹತ್ವ ಸ್ಪಷ್ಟಪಡಿಸಿ ಕನ್ನಡದಲ್ಲೊಂದು ಚಿಕ್ಕ ಪುಸ್ತಕಬರೆದು ಪ್ರಚಾರಮಾಡಿದರೆ ಆಗದೆ; ಎಂದು. ಆಗ ಕೆಲವು ಓದುಗರ ಅಭಿರುಚಿಯಾದರೂ ಕೆರಳಿ, ಅವರು ಅತ್ಯಂತ ಮಹತ್ತಿನ ಪಿತ್ರಾರ್ಜಿತನಾಗಿ ತಮಗೆ ಬಂದ ಅದ್ವೈತತತ್ವದ ಜ್ಞಾನಕ್ಕಾಗಿ ಯತ್ನಿಸುವಂತಾಗಬಹುದಲ್ಲವೇ? ಅದ್ವೈತೀ ಜೀವನಕ್ಕೆ ತುಂಬಾ ಸಹಾಯವಾದ ತಮ್ಮ ಶ್ರೌತಸ್ಮಾರ್ತ ಸಂಪ್ರದಾಯಗಳ ಸರಿಯಾದ ರಕ್ಷಣೆಗಾಗಿ ಹೆಚ್ಚು ಹುರುಪು ತಂದುಕೊಳ್ಳುವಂತಾಗಬಹುದಲ್ಲವೇ? ಎಂದು. – ಈ ಪುಸ್ತಕ ಬರೆದದ್ದು ಈ ಆಸೆಯಿಂದ.

ಎಲ್ಲವರ್ಗದವರೂ ಅವರವರ ಆಚಾರ್ಯರನ್ನೇ ಅತಿಹೆಚ್ಚಿನ ಮಟ್ಟದವರೆಂದು ಭಾವಿಸುವುದು ತೀರಾ ನ್ಯಾಯವೇ. ಇನ್ನು ಹುಡುಗರಾಗಿದ್ದಾಗ ಕನ್ನಡ ಚರಿತ್ರೆಯ ಪುಸ್ತಕಗಳಲ್ಲಿ, ಶ್ರೀ ಶಂಕರಾಚಾರ್ಯರು, ಶ್ರೀ ರಾಮಾನುಜಾಚಾರ್ಯರು, ಶ್ರೀ ಮಧ್ವಾಚಾರ್ಯರು ಎಂಬ ಮೂರು ಆಚಾರ್ಯರಿದ್ದರು ಎಂದು ಓದಿದಾಗ, ಅವರ ಮಟ್ಟವೆಲ್ಲ ಒಂದೇತರದ್ದು ಎಂಬ ಭಾವನೆಯೂ ಸಾಮಾನ್ಯವಾಗಿ ಉಂಟಾದುದುಂಟು. ಆದರೆ ಕೇವಲ ಶಿಷ್ಯರೆಂಬ ವಾತ್ಸಲ್ಯದಿಂದಲ್ಲ; ನಿಜಕ್ಕೂ ಶ್ರೀ ಶಂಕರಾಚಾರ್ಯರು ಇತರ ಆಚಾರ್ಯರ ವರ್ಗದವರೇ ಅಲ್ಲ; ಅವರು ಏಕಮಾತ್ರವಾದ ಅದ್ವಿತೀಯ ಮಟ್ಟದವರು ಎಂಬುದಕ್ಕೆ ಧಾರಾಳವಾದ ಆಧಾರಗಳಿವೆ. ಪ್ರತಿಯೊಬ್ಬ ಅದ್ವೈತಿಯೂ ಇವನ್ನು ಅತ್ಯಗತ್ಯವಾಗಿ ತಿಳಿದಿರಬೇಕು. ಅವುಗಳಬಗ್ಗೆ ತುಂಬಾ ಹಿಗ್ಗುವಂತಾಗಬೇಕು.

ಶ್ರೀ ಶಂಕರಾಚಾರ್ಯರನ್ನು ಅದ್ವಿತೀಯರೆಂದು ವಿವರಿಸಿದರೆ ಇತರ ಆಚಾರ್ಯರನ್ನು ನಿಂದಿಸದಂತಾಗದೆ, ಇದು ನ್ಯಾಯವೇ, ಎಂಬ ಪ್ರಶ್ನೆ ಬಂದೀತು. ಆದರೆ ಪ್ರತಿಯೊಬ್ಬನೂ ತನ್ನಲ್ಲಿರುವ, ತನ್ನ ಹುಟ್ಟಿಂದ ತನಗೆಬಂದ ವಿಶೇಷತೆಯನ್ನು ಅರಿತುಕೊಂಡು ಅದನ್ನು ವೃದ್ಧಿಪಡಿಸಿದರೆಮಾತ್ರವೇ ತನ್ನ ಏಳಿಗೆ ಸಾಧಿಸಲು ಸಾಧ್ಯ. ಇತರರ ನಿಂದೆಗಾಗಿ ಹಾಗೆ ಮಾಡಿದರೆ ಮಾತ್ರವೇ ಅದು ತಪ್ಪಾಗುತ್ತದೆ. ಹೇಗೆಂದರೆ ಹಲವುಮಟ್ಟದ ವಿದ್ಯಾರ್ಥಿಗಳಿರುವ ವಿದ್ಯಾರ್ಥಿ ನಿಲಯದಲ್ಲಿ ಎಂ. ಎ. ಕ್ಲಾಸಿನ

ಹುಡುಗನಿದ್ದರೆ ಅವನು ತನ್ನ ಹಿರಿಮೆಯ ಸ್ಥಾನವನ್ನು ನೆನಪಿಗೆ ತಂದುಕೊಳ್ಳುತ್ತಿದ್ದರೆಮಾತ್ರವೇ ಕೆಳವರ್ಗಗಳ ವಿದ್ಯಾರ್ಥಿಗಳ ವಿನೋದ ಗುಲ್ಲು-ಆಲಸ್ಯ ನಿದ್ರೆಗಳಿಂದ ಆಕರ್ಷಿತನಾಗದೆ ತನ್ನ ಓದನ್ನು ಅತ್ಯಂತ ಕಠಿಣತರದಲ್ಲಿ ಮುಂದರಿಸಲು ಸಾಧ್ಯನಾಗುತ್ತಾನೆ. ಅಂತೆಯೇ ಅದ್ವೈತಿಯಾಗಿ ಹುಟ್ಟಿದವನು ಪ್ರಥಮತ ಶ್ರೀ ಶಂಕರಾಚಾರ್ಯರ ಅದ್ವಿತೀಯ ಹಿರಿಮೆ ಅರಿತುಕೊಂಡು, ಅವರಲ್ಲಿ ಸಂಪೂರ್ಣ ಭರವಸೆ ತಂದುಕೊಂಡು, ಅದ್ವೈತತತ್ವ ಕಲಿತು ಅರ್ಥಮಾಡಿಕೊಳ್ಳುವವರೆಗೂ ಇತರರ ಆದರ ಕುಚೋದ್ಯ, ದೂಷಣೆ, ಮುಂತಾದವಕ್ಕೆ ಲಕ್ಷ್ಯಕೊಡದಿರುವ ಮನೋಭಾವನೆ ಬೆಳೆಸುವಂತಾಗಬೇಕು. ಅದಕ್ಕೆ ಈ ಪುಸ್ತಕ ಸಹಾಯವಾಗಲಿ ಎಂಬುದು ನನ್ನ ಆಸೆ.

ಅದ್ವೈತ ಸಂಪ್ರದಾಯದ ಕುಲದಲ್ಲಿ ಹುಟ್ಟಿದವನು ಅದ್ವೈತವನ್ನು ಕಲಿಯಲೇಬೇಕು ಎಂಬುದಕ್ಕೆ ಇನ್ನೂ ಒಂದು ಅತಿಪ್ರಬಲವಾದ ಕಾರಣವಿದೆ. ಅಂಥ ಕುಟುಂಬದಲ್ಲಿ ದೇವರು ಬೇಕೆಂದೇ ನಮಗೆ ಜನ್ಮ ಕೊಟ್ಟಿದ್ದಾನೆ. ಸರ್ವಜ್ಞನಾದ ಅವನ ವಿಶ್ವದ ಯಾವ ಮೂಲೆಯಲ್ಲಿಕೂಡ ಯಾವುದೂ ಕಾರಣವಿಲ್ಲದೆ, ಅವ್ಯವಸ್ಥೆಯಿಂದ, ನಡೆಯುವುದೆಂಬುದಿಲ್ಲ. ಮೂಢರಾದ ನಮ್ಮಿಂದ ಎಷ್ಟೋ ಕೆಲಸಗಳು ಅಕಸ್ಮಾತ್ತಾಗಿ ನಡೆಯುತ್ತವೆಂದು, ದೇವರು ಹಾಗಾಗಲು ಬಿಡುತ್ತಾನೆ ಎಂದು ಭಾವಿಸುವುದು ದೇವರಿಗೆ ದೊಡ್ಡ ದ್ರೋಹ ಎಣಿಸಿದಂತೆಯೇ ಸರಿ. ಅವನು ಕಿರಾ ಕಿರಾ ಚಿಕ್ಕದಾದ ಪ್ರತಿ ಅಣುವಿನಲ್ಲೂಕೂಡ ಅತ್ಯಂತ ಶಿಸ್ತಿನ ರಚನಾಕ್ರಮ ತುಂಬಿಸಿರುವ ಅಪಾರ ಸಮರ್ಥನು. ನಮ್ಮ ಧರ್ಮವು ಸಾರಿರುವಂತೆ ವಿಶ್ವವು, ಎಂದರೆ ಅದರ ಪ್ರತಿಭಾಗವೂ, ಧರ್ಮದಲ್ಲಿ ಪ್ರತಿಷ್ಠಿತವಾಗಿದೆ, ಇದನ್ನು ನಂಬುವ.

ನಮ್ಮ ಜನ್ಮದ ಕುಟುಂಬದ ವಿಶೇಷವಾದ ಧಾರ್ಮಿಕ ವಾತಾವರಣ, ಅನುಕೂಲತೆ, ತರಬೇತೀ ಕ್ರಮ ಮುಂತಾದವು ನಮಗೆ ಸಿಕ್ಕುವಂತಾಗುವುದು. ನಮ್ಮ ಹಿಂದಿನ ಜನ್ಮಗಳ ಕರ್ಮಗಳ ಮತ್ತು ಸಾಧನೆಗಳ ಫಲವಾಗಿ; ಆ ಹಿಂದಿನ ಜನ್ಮಗಳ ಅಭ್ಯಾಸಗಳ ಮತ್ತು ಒಲವುಗಳ ಫಲವಾಗಿ; ಮತ್ತು ಅವನ್ನೇ ಈ ಜನ್ಮದಲ್ಲೂ ಮುಂದರಿಸಲಿ ಎಂಬ ಅನುಕೂಲತೆಗಾಗಿ, ಪರಂಪರಾನುಗತವಾಗಿ ಅದ್ವೈತತತ್ವವನ್ನು ಕಲಿಯುತ್ತ, ಅದಕ್ಕೆ ಪೋಷಕವಾದ ಶ್ರೌತಸ್ಮಾರ್ತ ಕರ್ಮಗಳನ್ನು ನಡೆಸುತ್ತ ಬಂದ ಕುಟುಂಬದಲ್ಲಿ ಜನಿಸಿದವನಿಗೆ ಸಿಕ್ಕುವ ದೇಹದಲ್ಲಿ, ರಕ್ತಗತವಾಗಿ ಅವುಗಳ ಅಭ್ಯಾಸಕ್ಕೆ ಒಗ್ಗುವ ಸಮರ್ಥತೆ ಇದೆ. ಸಾಧನಕ್ಕೆ ಇದು ತುಂಬಾ ಅನುಕೂಲವಾಗುತ್ತದೆ. ಆದ್ದರಿಂದ ಅದ್ವೈತೀ ಪಂಥದವರ ಮನೆಯಲ್ಲಿ ಜನಿಸಿದರೆ ಅದ್ವೈತದ ಸಾಧನೆ ಸುಲಭವಾಗುತ್ತದೆ. ಅಂತೆಯೇ ದ್ವೈತಿಗಳಲ್ಲಿ ಹುಟ್ಟಿದರೆ ದ್ವೈತ ಪಂಥದ ಸಾಧನೆ, ವಿಶಿಷ್ಟಾದ್ವೈತಿಗಳಲ್ಲಿ ಹುಟ್ಟಿದರೆ ಆ ಪಂಥದ ಸಾಧನೆ ಸುಲಭವಾಗುತ್ತದೆ

ಇವೆಲ್ಲವೂ ಹಿಂದೂ ಧರ್ಮದ ಪಂಥಗಳೇ ಅಲ್ಲವೇ ? ಯಾವುದಾದರೇನು ? ಎನ್ನು ವಂತಿಲ್ಲ, ಏಕೆಂದರೆ ಈ ತರ ತರದ ಸಾಧನೆಗಳ ಫಲ ಒಂದೇ ಅಲ್ಲ.

ಎಲ್ಲ ಧಾರ್ಮಿಕ ಸಾಧನೆಗಳ ಮುಖ್ಯಗುರಿ ನಮ್ಮನ್ನು ಜನ್ಮಮರಣಗಳ ಗೊಂದ ಲದಿಂದ ಬಿಡುಗಡೆ ಮಾಡುವುದು. ಏಕೆಂದರೆ ನಮ್ಮ ಇಲ್ಲಿನ ಬಾಳಲ್ಲಿಸಿಕ್ಕುವ ಸುಖ ಅತ್ಯಲ್ಪತರದ್ದು, ತುಂಬಾ ದುಃಖ ಮಿಶ್ರಿತವಾದದ್ದು. ಆದರೆ ಜನನ ಮರಣಗಳಿಂದ ಬಿಡುಗಡೆ ಹೊಂದಿದ ಮುಕ್ತರಿಗೆ ಸಿಕ್ಕುವ ಆನಂದ ಅಪರಿಮಿತವಾದುದು. ಆದ್ದರಿಂದ ಅದಕ್ಕಾಗಿ ಯತ್ನಿಸುತ್ತಿರಬೇಕು ಎನ್ನುತ್ತದೆ ಶಾಸ್ತ್ರ ಈ ಮುಕ್ತಿಯಲ್ಲಿ ಎರಡು ತರ ದವಿವೆ, ಅದ್ವೈತ ತತ್ವದ ಜ್ಞಾನ, ಮತ್ತು ಅಭ್ಯಾಸಗಳಿಂದ ಸಿಕ್ಕುವ ಸಾಯುಜ್ಯ ಮುಕ್ತಿ ಎಂಬುದು ಜನನ ಮರಣಗಳಿಂದ ಸಂಪೂರ್ಣವಾದ ಬಿಡುಗಡೆ ಕೊಡುವಂಥ ಹದ್ದು. ಶ್ರೌತಸ್ಮಾರ್ತ ಕರ್ಮಗಳ ಅನುಷ್ಠಾನದಿಂದ ಚಿತ್ತಶುದ್ಧಿ ಸಂಪೂರ್ಣ ಬೆಳೆಸಿ ಆತ್ಮ ಚಿಂತನೆಯಿಂದ ಆತ್ಮ ಸಾಕ್ಷಾತ್ಕಾರವನ್ನು ಪಡೆದು, ಬ್ರಹ್ಮವೇ ಆಗಿ ಆನಂದ ಘನವೇ ಆದ ಬ್ರಹ್ಮನಲ್ಲಿ ಐಕ್ಯವಾಗುವ ಮುಕ್ತಿಯಿಂದ ಹಿಂದೆ ಬರುವುದೆಂಬುದಿಲ್ಲ. ಅದು ಧಾರಾಳ ಪೆನ್ಶನ್ ಪಡೆದು ಚಾಕರಿಯಿಂದ ಸಂಪೂರ್ಣ ನಿವೃತ್ತಿ ಹೊಂದಿದಂತೆ.

ಇತರ ಪಂಥಗಳ ಸಾಧನದಿಂದ ಸಿಕ್ಕುವುದು ಕೇವಲ ಸಾಲೋಕ್ಯ, ಸಾಮೀಪ್ಯ ಅಥವಾ ಸಾರೂಪ್ಯ ಮುಕ್ತಿ. ಅದರಲ್ಲಿ ವೈಕುಂಠ, ಕೈಲಾಸ, ಗೋಲೋಕ ಮುಂತಾ ದವುಗಳ ಅತಿ ದೀರ್ಘಕಾಲದ ವಾಸ ಅಲ್ಲಿ ಆನಂದಸ್ವರೂಪನಾದ ದೇವರ ಸಾಮೀಪ್ಯ ದಿಂದ ಉಂಟಾಗುವ ಆನಂದದ ಅನುಭವ ಲಭಿಸುತ್ತದೆ. ತನ್ನಲ್ಲೇ ಇರುವ ಆನಂದ ವಲ್ಲ, ಆದರೆ ಅತ್ಯಂತ ದೀರ್ಘಕಾಲದ ಅನಂತರವಾದರೂ ಪುನಃ ಜನನಮರಣ ಗಳ ಗೊಂದಲಕ್ಕೆ ಹಿಂದೆ ಬರುವ ಅವಶ್ಯಕತೆಯೂ ಇದ್ದೇಇದೆ, ಆದ್ದರಿಂದ ಅದು ರಾಜನನ್ನು ಕ್ರಮಯುಕ್ತವಾಗಿ ಸೇವಿಸಿದ್ದರಿಂದ ಅವನಿಂದ ದೀರ್ಘಕಾಲದ ರಜೆ ಅನು ಗ್ರಹಿಸಲ್ಪಟ್ಟು ಆಕಾಲದಲ್ಲಿ ವಿಶ್ರಾಂತಿ ಹೊಂದಿದಂತೆ; ಆದರೆ ಪುನಃ ಚಾಕರಿಗೆ ಸೇರಬೇಕಾದುದು ಅಲ್ಲಿ ತಪ್ಪಿದ್ದಲ್ಲ. ಈ ತರದ ವೈಕುಂಠ ಮುಂತಾದವುಗಳ ವಾಸ ವೆಂಬ ಮುಕ್ತಿಯ ಅಪೂರ್ಣತೆಯನ್ನು ನಮಗೆ ತಿಳಿಸಲಿಕ್ಕೆಂದೇ ಪುರಾಣಗಳಲ್ಲಿ ವೈಕುಂಠದಲ್ಲಿದ್ದ ಜಯ ವಿಜಯರಿಗೆ ಪುನಃ ಜನ್ಮ ತಳೆಯಬೇಕಾಗಿ ಬಂದ ವಿಚಾರ, ಶ್ರೀಮನ್ನಾರಾಯಣನಿಗೂ ಕೂಡ ಅಲ್ಲಿ ಋಷಿಗಳ ಶಾಪದ ಗೊಂದಲ ಬಂದುದು ಲಕ್ಷ್ಮಿ ಸಿಟ್ಟಿಂದ ಹೊರಟು ಹೋದ ಸಮಸ್ಯೆ ಉಂಟಾದುದು ಮುಂತಾದವುಗಳನ್ನು ಪುರಾಣಗಳು ತಿಳಿಸುತ್ತವೆ,

ನಮ್ಮ ಆತ್ಮನು ಪರಮಾತ್ಮನಿಂದ ಬಂದವನಿದ್ದು ಕಟ್ಟಕಡೆಗೆ ಸಾಯುಜ್ಯ ಮುಕ್ತಿ ಯಲ್ಲಿ ಪರಮಾತ್ಮನನ್ನೇ ಸೇರುವುದನ್ನು ಹೊಳೆಯ ನೀರು ಸಮುದ್ರ ಸೇರುವುದಕ್ಕೆ

ಹೋಲಿಸುವುದುಂಟು. ಸಾಗರದಿಂದಲೇ ಹೊರಟ ನೀರು ಆವಿಯಾಗಿ ಮೋಡವಾಗಿ ಮಳೆಯಾಗಿ ಹನಿಯಾಗಿ ಹಳ್ಳವಾಗಿ ನದಿಯಾಗಿ, ಈ ಪ್ರತಿ ಘಟನೆಯಲ್ಲೂ ತನ್ನ ಅಲ್ಪತೆಯಿಂದ, ತನ್ನ ವಿರೋಧಕ್ಕೆ ಬರುವ ತೊಡಕುಗಳಿಂದ, ಅವಿಶ್ರಾಂತವಾಗಿ ಕಷ್ಟಪಡುತ್ತ, ಕಂಗಾಲಾಗುತ್ತ, ಆದರೆ ಅವನ್ನು ಎದುರಿಸಿ ಮುಂದರಿಯುತ್ತ ಕಟ್ಟ ಕಡೆಗೆ ಸಮುದ್ರವನ್ನೇ ಸೇರುತ್ತದೆ. ಆಗಮಾತ್ರವೇ ಅದು ಸಮುದ್ರದೊಡನೆ ಬೆರೆತು ತನ್ನ ಪ್ರತ್ಯೇಕತೆ, ಅಲ್ಪತೆ, ಭಯ ಕಳಕೊಂಡು ಗಂಭೀರವಾದ ಅಪಾರವಾದ ಸಾಗರವೇ ಆಗುತ್ತದೆ ಅಗಮಾತ್ರವೇ ಅದು ತನ್ನ ಪರಿಪೂರ್ಣತೆಯ ಸ್ಥಿತಿಯಿಂದಾಗಿ ಯಾವುದಕ್ಕೂ ಆಶಿಸಬೇಕಾಗಿಲ್ಲ; ಶ್ರಮಿಸಬೇಕಾಗಿಲ್ಲ

ಮಗುವಿಗೆ ತಾಯಿಯ ಮಡಿಲಲ್ಲಿ ಸಿಕ್ಕುವ ರಕ್ಷಣೆಯೂ ಆರೈಕೆಯೂ ಅತ್ಯಂತ ಸುಖಕರದ್ದು. ಆದರೂ ಯಾರೂ ಆಯುಷ್ಯವನ್ನೆಲ್ಲ ಆಸ್ಥಿತಿಯಲ್ಲೇ ಕಳೆಯಲು ಆಶಿಸುವುದಿಲ್ಲ ಪ್ರತಿ ವ್ಯಕ್ತಿಯ ಅಂತರಾಳದಲ್ಲಿ ತನ್ನ ಅಲ್ಪತೆ, ದುರ್ಬಲತೆ, ಅಜ್ಞಾನ ಪರಾವಲಂಬನ ಸ್ಥಿತಿ, ತಾನು ಗೆಲಲೇಬೇಕೆಂಬ ಆತ್ಮ ಪ್ರೇರಣೆಯು ಅವನನ್ನು ಎಷ್ಟಕ್ಕೂ ಸುಮ್ಮನಿರಲು ಬಿಡದು.

ದೇವರ ದಾಸ್ಯದಿಂದ, ಅವನ ಕರುಣೆಯಿಂದ, ತಾಯಿಯಿಂದ ಮಗುವಿಗೆ ಸಿಕ್ಕುವ ತರದ ವೈಕುಂಠವು ನಮ್ಮ ಆತ್ಮನ ಪರಮಾವಧಿ ನಿರ್ವಾಣವಲ್ಲ. ಆ ನಿರ್ವಾಣವು ಸಾಯುಜ್ಯ ಮುಕ್ತಿಯಲ್ಲಿ ಬ್ರಹ್ಮವೇ ಆಗುವುದಾಗಿದೆ. ಅಪೂರ್ಣ ಶಕ್ತಿಯ ಔಷಧ ಎಷ್ಟೇ ರುಚಿಕರವಿದ್ದರೂ ಏನು ಪ್ರಯೋಜನ ? ಈಗ ಕಹಿಯಾಗಿ ತೋರುವ ಮದ್ದಾದರೂ ರೋಗವನ್ನು ಸಂಪೂರ್ಣವಾಗಿ ಗುಣಮಾಡುವ ಮದ್ದೇ ನಮ್ಮ ಪಾಲಿಗೆ ಹಿತಕರ ಜೀವಾತ್ಮನಿಗಿರುವ ಇಂಥ ಅತ್ಯಂತ ಸಮರ್ಥ ಔಷಧ ಅಧ್ಯಾತ್ಮ ಜ್ಞಾನ. ಅದಕ್ಕೆ ಒಲವು ಇದ್ದು ಹುಟ್ಟಿದ ನಾವು ನಿಜಕ್ಕೂ ಭಾಗ್ಯವಂತರು. ಅತ್ಯಂತ ಶ್ರೇಷ್ಟ ವೈದ್ಯರಿಗೆ ಮಾತ್ರ ಅತ್ಯಂತ ಸಮರ್ಥತೆಯ ಚಿಕಿತ್ಸೆ ಸಾಧ್ಯ. ಶ್ರೀಶಂಕರಾಚಾರ್ಯರು ಮಾತ್ರವೇ ಅಂಥ ಅತ್ಯಂತ ಸಮರ್ಥ ವೈದ್ಯರು. ಅವರ ಮಹಿಮೆಯ ವಿವರಗಳನ್ನು ಕೇಳಿ ತಿಳಿಗೊಂಡು ಸ್ಫೂರ್ತಿಹೊಂದುವ !

## ೨ ಸಾಯುಜ್ಯ ಮೋಕ್ಷದ ಬೋಧನೆಗೆ ಶ್ರೀ ಶಂಕರಾಚಾರ್ಯರ ಅದ್ವಿತೀಯ ಯೋಗ್ಯತೆ.

ಆಶ್ವಲಾಯನರು, ಬೋಧಾಯನರು ಮುಂತಾದ ನಮ್ಮ ಆಚಾರ್ಯರು ಪುರಾಣ ಕಾಲದವರು. ಅವರು ಶ್ರುತಿ (ವೇದಗಳು) ಮತ್ತು ಸ್ಮೃತಿ ( ಮನುಸ್ಮೃತಿ – ಮುಂತಾದವು) ಗಳ ಆಧಾರದಿಂದ ನಮ್ಮ ಜೀವನವನ್ನು ಉತ್ತಮ ಧಾರ್ಮಿಕರೀತಿ

ಯಲ್ಲಿ ಬೆಳೆಸುವ ಬೇರೆ ಬೇರೆ ದಾರಿಗಳನ್ನು ವಿಧಿಸಿದ್ದಾರೆ. ಅವರು ಬೋಧಿಸಿರುವ ಈ ದಾರಿಗಳಲ್ಲಿ ವ್ಯತ್ಯಾಸಗಳಿವೆ. ಏಕೆಂದರೆ ಎಲ್ಲಾ ವೇದಗಳನ್ನು ಕಲಿಯುವದಕ್ಕು ವಿವಿಧ ಕ್ರಮದ ಸ್ಮೃತಿಗಳ ಆಚಾರಗಳನ್ನು ನಡೆಸುವುದಕ್ಕು ಈಕಾಲದ ಸಾಮಾನ್ಯ ಜನರಿಗೆ ಸಮರ್ಥತೆ ಸಾಲದು. ಆದರೆ ಪ್ರತಿ ಆಚಾರ್ಯರು ತಮ್ಮವರಿಗಾಗಿ ವಿಧಿಸಿದ ಕ್ರಮವೂ ಪೂರ್ಣತರದ್ದೇ ಆಗಿದೆ. ಆದ್ದರಿಂದ ಅವುಗಳ ಮಟ್ಟವೆಲ್ಲ ಒಂದೇ. ಅವೆಲ್ಲವೂ ಆತ್ಮಸಾಕ್ಷಾತ್ಕಾರಕ್ಕೆ ಬೇಕಾದ ಚಿತ್ತಶುದ್ಧಿಯ ಪೀಠಿಕೆ ಹಾಕುವ ಸಮರ್ಥತೆಯುಳ್ಳವುಗಳಾಗಿವೆ. ಅವನ್ನೆಲ್ಲ ಶ್ರೌತಸ್ಮಾರ್ತ ಕರ್ಮಗಳು ಎನ್ನುತ್ತೇವೆ.

ಶ್ರೀ ಶಂಕರಾಚಾರ್ಯರು ಕಲಿಯುಗದ ಪ್ರಥಮ ಆಚಾರ್ಯರು; ಮತ್ತು ಚಾರಿತ್ರಿಕ ಕಾಲದ ಪ್ರಥಮ ಆಚಾರ್ಯರು. ಪ್ರಾಯಶಃ 1100 ವರ್ಷಗಳಿಗೂ ಹಿಂದೆ ಬಾಳಿದವರು. ಅವರ ಕಾಲದಲ್ಲಿ ಬೌದ್ಧರಾಗಿರದ ಹಿಂದುಗಳ ಬಹು ಮಟ್ಟಿನವರು ಆಚರಿಸುತ್ತಿದ್ದುದು ಈ ಶ್ರೌತಸ್ಮಾರ್ತ ಕರ್ಮಗಳನ್ನೇ. ಆದರೆ ಕಾಲದೋಷದಿಂದಾಗಿ ಜನರು ಧಾರ್ಮಿಕ ಜೀವನದ ಈ ಪೀಠಿಕೆಯಮೇಲೆ ಆತ್ಮಸಾಕ್ಷಾತ್ಕಾರದ ಕಟ್ಟಡ ಕಟ್ಟಬೇಕೆಂಬುದನ್ನು ಮರೆತು ಈ ಶ್ರೌತಸ್ಮಾರ್ತ ಕರ್ಮಗಳ ತಲಕಟ್ಟಲ್ಲೇ ಸಂಪೂರ್ಣವಾಗಿ ನಿರತರಾಗಿದ್ದರು. ಶ್ರೀಶಂಕರಾಚಾರ್ಯರು ಈ ತಪ್ಪನ್ನು ತಿದ್ದಿ ಆತ್ಮಸಾಕ್ಷಾತ್ಕಾರದ ಮಹತ್ತನ್ನು ಬೋಧಿಸಿದರೇಹೊರತು ಶ್ರೌತಸ್ಮಾರ್ತ ಕ್ರಮವನ್ನೇ ತಿದ್ದಲಿಕ್ಕೆ ಹೋದವರಲ್ಲ. ಏಕೆಂದರೆ ಅನ್ಯ ಮತೀಯರ ತೊಡಕಿಲ್ಲದ ಮತ್ತು ಕಲಿಯಕಾಲದ ದೋಷವಿಲ್ಲದ ಪುರಾಣಕಾಲದ ಹೆಚ್ಚು ಯೋಗ್ಯಸಾಧಕರಿಗಾಗಿ, ಆ ಕಾಲದ ಆಚಾರ್ಯರು ನಿರ್ಮಿಸಿದ್ದ ಶ್ರೌತಸ್ಮಾರ್ತ ಆಚಾರಗಳ ಯೋಗ್ಯತೆ ಎಷ್ಟಕ್ಕೂ ಅಪೂರ್ಣವಾಗಿರಲಿಲ್ಲ. ಅವನ್ನು ತಿದ್ದಿ ಮತ್ತಷ್ಟು ಉತ್ತಮಮಾಡುವದೆಂದರೆ ಮತ್ತಷ್ಟು ಬಿಗಿಮಾಡುವುದು ಮಾತ್ರ ಸಾಧ್ಯವಿತ್ತು. ಕಲಿಕಾಲದ ಕಡಿಮೆ ಸಮರ್ಥತೆಯವರಿಗೆ ಅದು ಬಾಧಕವೇ ಹೊರತು ಪ್ರಯೋಜನಕಾರಿಯಾಗುತ್ತಿರಲಿಲ್ಲ

ಶ್ರೌತಸ್ಮಾರ್ತ ಕ್ರಮದ ಆಚಾರಗಳು ಶ್ರೀ ಶಂಕರಾಚಾರ್ಯರ ಕಾಲದ ಅನಂತರ ಕೆಲವು ಶತಮಾನಗಳವರೆಗೆ ಚೆನ್ನಾಗಿ ಅಭ್ಯಾಸಿಸಲ್ಪಟ್ಟದ್ದರೂ, ದೇಶಕ್ಕೆ ಮುಸುಲ್ಮಾನರ ಹಾವಳಿ ಆರಂಭವಾದಂದಿನಿಂದ ಅವು ಕೆಲವರಿಗಾದರೂ ಆಚರಣೆಗೆ ಕಷ್ಟವಾಗಲಾರಂಭಿಸಿದವು. ಅಂಥವರ ಸಹಾಯಕ್ಕಾಗಿ ದೇವರಿಂದ ಪ್ರೇರಿತರಾಗಿ ಬಂದ ಹೊಸ ಆಚಾರ್ಯರು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಜನರ ಮುಂದಿನ ಜೀವನಕ್ಕೆ ತಮ್ಮ ಸುಲಭದಾರಿಗಳನ್ನು ಹಾಕಿಕೊಟ್ಟರು. ಮುಖ್ಯವಾಗಿ ನಾಮಜಪ, ಕೀರ್ತನೆ, ಭಜನೆ ಮುಂತಾದ ಭಕ್ತಿಪಂಥದ ದಾರಿಯನ್ನು ಶರಣಾಗತಿಯ ಅತ್ಯಂತ ಹೆಚ್ಚಿನ ಮಹತ್ವವನ್ನು ಅವರು ಬೋಧಿಸಿದರು. ಶ್ರೀವಿಷ್ಣುವಿನ ಅವತಾರ ಕಥೆಗಳೂ

ಲೀಲೆಗಳೂ ಇದಕ್ಕೆ ತುಂಬಾ ಅನುಕೂಲವಿದ್ದು ಶ್ರೀವಿಷ್ಣುವೇ ಅತ್ಯಂತ ಶ್ರೇಷ್ಠ ದೇವರು; ಶಿವನನ್ನು ಕೇವಲ ಕೆಳಮಟ್ಟಕ್ಕೆ ತಳ್ಳಬಹುದು, ಅಥವಾ ತಾತ್ಸಾರಿಸಬಹುದು, ಎಂಬ ಭಾವನೆ ಬೆಳೆಸಿದರು. ಹನುಮಂತನ ದಾಸ್ಯಭಾವ, ಶ್ರೀ ರಾಧೆಯ ಅಪಾರ ಕೃಷ್ಣ ಪ್ರೇಮ ಮುಂತಾದವುಗಳಿಗೆ ಅತ್ಯಂತ ಪ್ರಾಮುಖ್ಯತೆ ಕೊಟ್ಟರು. ಧರ್ಮದ ಆಚರಣೆ ಸುಲಭಮಾಡುವ ಭರದಲ್ಲಿ ಕೆಲವು ಹೊಸ ಆಚಾರ್ಯರು ಶ್ರೌತ ಸ್ಮಾರ್ತ ಕ್ರಮದ ವರ್ಣ ಧರ್ಮದ ಕಟ್ಟುಗಳನ್ನು ತ್ಯಜಿಸಲು ಕೂಡ ಹೇಳಿದ್ದುಂಟು!

ಹೀಗೆ ನಮ್ಮ ಧರ್ಮವನ್ನು ತಿದ್ದಿದ ಮುಖ್ಯ ಆಚಾರ್ಯರು ವಿಶಿಷ್ಟಾದ್ವೈತದ ಪ್ರತಿಪಾದಕರಾದ ಶ್ರೀ ರಾಮಾನುಜಾಚಾರ್ಯರು, ದ್ವೈತ ಪಂಥದ ಪ್ರತಿಪಾದಕರಾದ ಮಧ್ವಾಚಾರ್ಯರು, ಶುದ್ಧಾದ್ವೈತಮತದ ಆಚಾರ್ಯರಾದ ಶ್ರೀ ವಲ್ಲಭರು, ಸ್ವಾಭಾವಿಕ ಭೇಧಾಭೇಧ ಮತದ ಆಚಾರ್ಯರಾದ ಶ್ರೀ ನಿಂಬಾರ್ಕರು, ಅಚಿಂತ್ಯ ಭೇದಾಭೇದ ಪ್ರತಿಪಾದಿಸಿದ ಶ್ರೀ ಚೈತನ್ಯರು, ಇವರೆಲ್ಲರೂ ವೈಷ್ಣವರು ಈಕಾಲದಲ್ಲೇ ಶಿವನಲ್ಲಿ ಸುಲಭವಾಗಿ ಭಕ್ತಿ ಬೆಳೆಸುವ ದಾರಿಗಳನ್ನು ಅನೇಕಾನೇಕ ಸುಪ್ರಸಿದ್ಧ ಭಕ್ತರು ಇಡೀ ದೇಶದಲ್ಲಿ ಪ್ರಚಾರಮಾಡಿದ್ದರು ಕರ್ನಾಟಕದಲ್ಲಿ ಈ ಕೆಲಸವನ್ನು ಅತಿ ಚೆನ್ನಾಗಿ ಮಾಡಿದವರು ಶ್ರೀ ಬಸವಣ್ಣನವರು. ದೇಶದಲ್ಲಿ ಇನ್ನೂ ಅನೇಕ ಪಂಥಗಳು ಆರ್ಯ ಸಮಾಜ, ಬ್ರಹ್ಮ ಸಮಾಜ ಮುಂತಾದವೂ ಜನರ ಉದ್ಧಾರಕ್ಕೆಂದು ಉದ್ಭವಿಸಿದವು ಆದರೆ ಅವು ಹೆಚ್ಚು ಪ್ರಾಮುಖ್ಯದವಲ್ಲ

ಈ ಎಲ್ಲ ಪಂಥಗಳು ಉಂಟಾದುದು ಸನಾತನ ಧರ್ಮಕ್ಕೆ ದೇಶದಲ್ಲಿ ಆಪತ್ಕಾಲ ಬಂದಾಗ ಈ ಆಚಾರ್ಯರೆಲ್ಲ ಹೇಳುತ್ತಿದ್ದುದು, ತಮ್ಮ ಬದಲಾವಣೆಗಳಿಂದ ಉಂಟಾದ ಹೊಸ ಪಂಥಗಳು ಮುಂಚಿಗಿಂತ ಶ್ರೇಷ್ಠತರದವುಎಂದು. ಆದರೆ ಅದು ಹೇಗೆ ಸಾಧ್ಯ? ವಿಶೇಷ ನೆರೆಯ ಹಾವಳಿಯಿಂದಾಗಿ ನದಿಯ ದಡದಮೇಲಿದ್ದ ಖಾಯಂ ಮನೆ ಬಿಟ್ಟು ಆಪತ್ಕಾಲದ ವಸತಿಗಾಗಿ ಗುಡ್ಡದಮೇಲೆ ಗುಡಿಸಲು ಕಟ್ಟಿಕೊಂಡವರ ಮನೆಗಳ ತರದ ಕೆಳಮಟ್ಟದವು ಮಾತ್ರನೇ ಆಗಲು ಅವಕ್ಕೆ ಸಾಧ್ಯವಲ್ಲವೇ ? ಆದ್ದರಿಂದ ಶ್ರೀ ಶಂಕರಾಚಾರ್ಯರೇ ಮೆಚ್ಚಿದ ಶ್ರೌತಸ್ಮಾರ್ತ ಸಂಪ್ರದಾಯಗಳನ್ನು ಈಗಲೂ ಆಚರಿಸಲು ಸಾಧ್ಯವಾದವು, ಅವೇ ಅತ್ಯಂತ ಶ್ರೇಯಸ್ಕರವೆಂದು ಭಾವಿಸಬೇಕು

ತಮ್ಮ ತಮ್ಮ ಆಚಾರ್ಯರೆಲ್ಲ ದೈವೀ ಪುರುಷರೇ ಆಗಿದ್ದಾರೆ ಎಂಬುದು ಆಯಾಯ ಪಂಥದ ಶಿಷ್ಯರ ಭಾವನೆ. ಇದು ಹಾಗಿರಲೂಬಹುದು. ಹಲವು ಶತಮಾನಗಳ ಕಾಲದಲ್ಲಿ ಕೋಟ್ಯಾಂತರ ಶಿಷ್ಯರ ಜೀವನವನ್ನು ತಮ್ಮ ಧರ್ಮದ ಪಂಥಕ್ಕೆ ಬಗ್ಗಿಸಿ ಬಾಳಿಸಿದ ಇವರೆಲ್ಲ ಅಪಾರಮಹಿಮೆಯುಳ್ಳವರೇ ಹೌದು

ಸಾಮಾನ್ಯಮಾನವರಾಗಿರರು. ಶ್ರೀ ಶಂಕರಾಚಾರ್ಯರು ಶಿವನ ಅವತಾರ, ಶ್ರೀ ಮಧ್ವಾಚಾರ್ಯರು ವಾಯುವಿನ ಅವತಾರ, ಶ್ರೀ ನಿಂಬಾರ್ಕರು ಸುದರ್ಶನ ಚಕ್ರನ ಅವತಾರ, ಶ್ರೀ ವಲ್ಲಭಾಚಾರ್ಯರು ಅಗ್ನಿಯ ಅವತಾರ, ಶ್ರೀ ಚೈತನ್ಯರು ರಾಧಾಕೃಷ್ಣರ ಅವತಾರ, ಶ್ರೀ ಬಸವಣ್ಣನವರು ನಂದೀಶ್ವರನ ಅವತಾರ ಎಂದು ಅವರವರ ಶಿಷ್ಯವರ್ಗದವರೇ ಒಪ್ಪಿದ ಪ್ರತಿಪಾದನೆಗಳಾಗಿವೆ.

ಹಾಗಿದ್ದರೆ, ಈ ಆಚಾರ್ಯರುಗಳಿಗೆ ಅವರುಗಳ ಮೂಲದೇವರ ಮಟ್ಟಗಳೇ ಬಂದಿರಬೇಕೆಂದು ನಾವು ಭಾವಿಸಬೇಕಾಗುತ್ತದೆ. ನಮ್ಮ ಶಾಸ್ತ್ರವು ತ್ರಿಮೂರ್ತಿಗಳಿಗೆ ಪ್ರಥಮ ಸ್ಥಾನ ಕೊಡುತ್ತದೆ ಶಿವ ವಿಷ್ಣುಗಳಲ್ಲಿ ಬೇಧಭಾವನೆ ಮಾಡಕೂಡದು, ಎಂದೂ ಸಾರಿದೆ. ಉಳಿದ ದೇವತೆಗಳು ತ್ರಿಮೂರ್ತಿಗಳ ಪರಿವಾರಮಟ್ಟದವು ಎಂದಿದೆ. ಆದ್ದರಿಂದ ಶಿವನ ಅವತಾರವಾದ ಶ್ರೀ ಶಂಕರಾಚಾರ್ಯರು ಪ್ರಥಮ ಶ್ರೇಣಿಯವರ ರಾಗುತ್ತಾರೆ. ಧರ್ಮದ ಉದ್ದಿಶ್ಯ ಮೋಕ್ಷ, ಈ ಭಾಗದ ಕೆಲಸವನ್ನು ತ್ರಿಮೂರ್ತಿ ಗಳಲ್ಲಿ ಶಿವನೇ ಅತಿಮುಖ್ಯವಾಗಿ ನಡೆಸುತ್ತಾನೆ ವಿಷ್ಣುವು ಸೃಷ್ಟಿಯ ಪಾಲನೆಯ ಜವಾಬ್ದಾರಿಯನ್ನು ಹೊತ್ತಿರುವವನು. ಎಂದರೆ ಸೃಷ್ಟಿಯೆಂಬ ಜೀವಾತ್ಮರ ಹುಟ್ಟು ಸಾವುಗಳ ಆಟವು ಯಶಸ್ವಿಯಾಗಿ ಮುಂದರಿಯುತ್ತಿರುವಂತೆ ಮಾಡುವ ಜವಾಬ್ದಾರಿ ಇರುವವನು. ಆದ್ದರಿಂದಲೇ ಅವನ ಸಹಾಯಕ್ಕೆ ಐಶ್ವರ್ಯದ ಬಂಧನ ಕೊಡುವ ಪತ್ನಿ ಶ್ರೀಲಕ್ಷ್ಮಿ, ಕಾಮದ ಬಂಧನ ಉಂಟುಮಾಡುವ ಮಗ ಮನ್ಮಥ ಇದ್ದಾರೆ. ಭಕ್ತರ ಕಲ್ಪನೆಯ ಶ್ರೀವಿಷ್ಣುವಿಗೆ ತುಂಬಾ ಆಭರಣಗಳು ಅಲಂಕಾರ, ವೈಭವ ಇದೆ; ಈ ದೇವರಿಗೆ ವಿಶೇಷಮಟ್ಟದ ಭೋಗ ನಿವೇದಿಸುವುದೇ ಕ್ರಮ. ಇದೆಲ್ಲ ಪಾಲನಾಕರ್ತ ವ್ಯದ ಕಲ್ಪನೆಗೆ ಹೊಂದಿಕೆಯಾಗುತ್ತದೆಯೇ ಹೊರತು, ನಿವೃತ್ತಿಮಾರ್ಗ ಹಿಡಿದು ಮೋಕ್ಷಕ್ಕೆ ಯತ್ನಿಸುವ ಋಷಿಗಳಿಗೆ, ಸನ್ಯಾಸಿಗಳಿಗೆ, ವಿರಕ್ತರಿಗೆ. ಆಕರ್ಷಣೀಯ ವಲ್ಲ. ವಿಷ್ಣುವೂ ಸಂಪೂರ್ಣ ಮುಕ್ತಿಯನ್ನು ದಯೆಪಾಲಿಸಲು ಶಕ್ತನಾದರೂ ಅವನು ತನ್ನ ಭಕ್ತರಲ್ಲಿ ಪ್ರೇರಿಸುವುದು ಮುಖ್ಯವಾಗಿ ಸಾಮೀಪ್ಯ ಮುಕ್ತಿಯ ಅಪೇಕ್ಷೆಯನ್ನು ಮಾತ್ರ ತಮಗೆ ಸಕ್ಕರೆಯಸವಿಬೇಕು. ತಾವೇ ಸಕ್ಕರೆಯಾಗಬೇಕೆಂದಿಲ್ಲ, ಎನ್ನುವ ಭಾವನೆಯನ್ನು ಮಾತ್ರ. ಶ್ರೀಕೃಷ್ಣನೇ ಚೈತನ್ಯ ಮಹಾಪ್ರಭುವಾಗಿ ಅವತರಿಸಿ ಧರ್ಮಪ್ರಚಾರ ಮಾಡಿದಾಗ ಅವರು ಒಂದು ಪ್ರಥಮವರ್ಗದ ಪಂಥ ಕಟ್ಟಬಹುದಿತ್ತು. ಆದರೂ ಅವರು ಇತರ ಆಚಾರ್ಯರಂತೆ ತಮ್ಮ ಪಂಥದ ಆಧಾರ ಗ್ರಂಥಗಳನ್ನು ತಾವೇ ಬರೆಯುವ ಗೋಜಿಗೆಕೂಡ ಹೋದವರಲ್ಲ! ಏಕೆಂದರೆ ಪಾಲನೆಯ ಕರ್ತವ್ಯ ವಿರುವ ದೇವರು ಜೀವಾತ್ಮರನ್ನೆಲ್ಲ ಸಂಸಾರದ ಬಂಧನದಿಂದ ಸಂಪೂರ್ಣವಾಗಿ ಬಿಡು ಗಡೆಮಾಡುವ ಕಾರ್ಯಕ್ಕೆ ಹೋಗುವುದಾದರೂ ಹೇಗೆ ಸಾಧ್ಯ? ತಮ್ಮ ನಾಟಕದ ಕಂಪೆನಿಯ ಅತ್ಯುತ್ತಮರು ಕಂಪೆನಿಯನ್ನು ಬಿಟ್ಟುಹೋಗುವಂತೆ ಮ್ಯಾನೇಜರೇ ಪ್ರೋತ್ಸಾಹಿಸುವುದುಂಟೇ?

ಶ್ರೀಶಂಕರಾಚಾರ್ಯರ ಹಿರಿಮೆಯನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲಿಕ್ಕೆ ಶಿವನ ಮಹತ್ವನ್ನು ಸ್ವಲ್ಪ ಚೆನ್ನಾಗಿ ತಿಳಿದಿರಬೇಕು, ಶ್ರೌತಸ್ಮಾರ್ತ ಸಂಪ್ರದಾಯದವರು ವಿಷ್ಣು ಶಿವರಲ್ಲಿ ಭೇದ ಕಾಣುವುದಿಲ್ಲ ವಿಷ್ಣುಪುರಾಣ ಮುಂತಾದವು ಭೇಧ ಕಾಣುವುದು ತಪ್ಪು ಎಂದೇ ಬೋಧಿಸಿವೆ. ಆದರೆ ಹೊಸದಾಗಿ ಉಂಟಾದ ವೈಷ್ಣವ ಪಂಥದವರು ಶಿವನ ತಾತ್ಸಾರಕ್ಕೆ ತುಂಬಾ ಕಾರಣರಾದರು. ಪದ್ಮಪುರಾಣದ ಬಹು ಮಟ್ಟಿನ ಭಾಗದಲ್ಲಿ ಈ ಬೇಧ ಕಾಣಕೂಡದೆಂದಿದ್ದರೂ, ಅದ್ವೈತದ ಪ್ರತಿಪಾದನೆಯಿದ್ದರೂ ತುದಿಯ ಒಂದು ಅಧ್ಯಾಯದಲ್ಲಿ ಮುಖ್ಯ ಭಾಗಕ್ಕೆ ತೀರಾ ವಿರುದ್ಧವಾಗಿರುವ ದ್ವೈತದ ಪ್ರತಿಪಾದನೆ, ಶಿವನು ಕೆಳಮಟ್ಟದವ ಎಂಬ ಪ್ರತಿಪಾದನೆ ಬರುತ್ತದೆ ಇದರ ಅರ್ಥ ಈ ಅಧ್ಯಾಯ ಪ್ರಕ್ಷಿಪ್ತ ಎಂಬುದು. ತಮ್ಮ ಪಂಥದ ಬೆಂಬಲಕ್ಕೆ ಇಂಥ ಕೆಲಸ ಧಾರಾಳವಾಗಿ ನಡೆದಿವೆ. ಶ್ರೌತಸ್ಮಾರ್ತ ಪಂಥದವರು ಯಾರನ್ನೂ ತಮ್ಮ ಮತಕ್ಕೆ ಎಳಿಸುವ ಯತ್ನವನ್ನೇ ಮಾಡಿದವರಲ್ಲ ಆದರೆ ಹೊಸ ಪಂಥದ ವೈಷ್ಣವರಲ್ಲಿ ಪ್ರಚಾರವು ರಕ್ತಗತವಾದುದು. ಹೊಸ ಪಂಥದ ಕೆಲವರು ಪುರಾಣಗಳಲ್ಲಿ ತಿದ್ದುಪಡಿ, ಶ್ಲೋಕಗಳ ತಿದ್ದುಪಡಿ, ಶಾಸನಗಳ ತಿದ್ದುಪಡಿ, ಎಲ್ಲ ಗುಟ್ಟಿನಲ್ಲಿ ನಡೆಸಿ ಆನಂತರ ಈ ತಿದ್ದುಪಡಿಗಳನ್ನೇ ತಮ್ಮ ಪಂಥದ ಮೂಲ ಆಧಾರಗಳೆಂದು ಪ್ರತಿಪಾದಿಸಿ ಶ್ರೌತಸ್ಮಾರ್ತ ವರ್ಗದ ಅನೇಕ ಸಾಮಾನ್ಯರನ್ನೋ ಯೋಚನೆಯ ಗೊಂದಲಕ್ಕೆ ಸಿಕ್ಕಿಸಿದ್ದುಂಟು. ಈ ಕಾಲದಲ್ಲಿ ತಮ್ಮ ಧಾರ್ಮಿಕ ತಳಹದಿ ಹೆಚ್ಚು ತಿಳಿಯದ, ಆದರೆ ಇವರ ಪ್ರಚಾರ ಮಾತ್ರ ಕೇಳಿದ, ಅನೇಕ ಸ್ಮಾರ್ತರೂ ಶಿವನು ನಿಜಕ್ಕೂ ಕೆಳಮಟ್ಟದವನಿರಬಹುದೇ ಎಂಬ ಸಂಶಯವನ್ನು ಈ ಕಾಲದಲ್ಲಿ ಹೊಂದಿದ್ದುಂಟು.

ಮಹಾಭಾರತದ ಅನುಶಾಸನ ಪರ್ವದ ಹದಿನೇಳನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಉಪಮನ್ಯುವೆಂಬ ಅತಿ ಶ್ರೇಷ್ಠ ತಪಸ್ವಿಯಿಂದ ದೀಕ್ಷೆ ಪಡೆದು ಶಿವನನ್ನು ಕುರಿತು ಕಠಿಣ ತಪಸ್ಸುಮಾಡಿ ಒಲಿಸಿದ ಕಥೆಯಿದೆ ಆಮೇಲೆ ಉಪಮನ್ಯುವಿನೊಡನೆ ತನ್ನ ಅತ್ಯಂತ ಅದ್ಭುತ ತರದ ಅನುಭವಗಳನ್ನು ವಿವರಿಸಿದಾಗ, ಉಪಮನ್ಯುವು ಅವನಿಗೆ ಶಿವನ ಸಹಸ್ರನಾಮವನ್ನು ಹೇಳುತ್ತಾನೆ. ಅದನ್ನೇ ಆಮೇಲೆ ಶ್ರೀಕೃಷ್ಣನು ಯುಧಿಷ್ಠಿರನಿಗೆ ಭೋಧಿಸುತ್ತಾನೆ. ಶ್ರೀರಾಮನು ಸ್ಥಾಪಿಸಿದ ರಾಮೇಶ್ವರ ದೇವಸ್ಥಾನವು ತ್ರೇತಾಯುಗದಿಂದ ಇಂದಿನವರೆಗೂ ಖ್ಯಾತಿ ಪಡೆದು ಬಂದ ಕ್ಷೇತ್ರ; ವಿಶ್ವೇಶ್ವರನ ಕಾಶೀ ಕ್ಷೇತ್ರವು ಯುಗಯುಗಾಂತರದಲ್ಲೂ ನಾಶವಾಗದ ಏಕಮಾತ್ರ ಅದ್ವಿತೀಯ ಕ್ಷೇತ್ರ ಅತ್ಯಂತ ಪುರಾತನ ಕಾಲದಿಂದಲೂ ಸನಾತನ ಧರ್ಮದ ಜೀವನಕ್ಕೆ ಅತಿ ಮುಖ್ಯ ಆಧಾರವಾಗಿ ಬಾಳಿಬಂದ ವಿದ್ವತ್ ಕ್ಷೇತ್ರ. ಆದರೆ ಶ್ರೀ ಕೃಷ್ಣನ ಬಾಲಲೀಲೆಗಳಿಗೆ ತುಂಬಾ ಖ್ಯಾತವಾದ ವೃಂದಾವನವು ಕೇವಲ ಹತ್ತನೆಯ ಶತಮಾನದಿಂದ ಖ್ಯಾತಿಗೆ ಬಂದುದು. ನಮ್ಮ ಚರಿತ್ರೆಯ ಪರಿಶೋಧಕರ

ಅಭಿಪ್ರಾಯದಂತೆ ದೇವರಲ್ಲಿ ಶಿವನಿಗಿಂತ ಪೂರ್ವಕಾಲದಿಂದ ಆರಾಧಿಸಲ್ಪಟ್ಟ ದೇವರಿಲ್ಲ. ವೇದಾಂತದ ಜ್ಞಾನಕ್ಕೆ ಅತಿಮುಖ್ಯ ಗ್ರಂಥವಾದ ಬ್ರಹ್ಮ ಸೂತ್ರವನ್ನು ಭಗವಾನ್ ವ್ಯಾಸರು ಬರೆದದ್ದು ಶಿವನ ಅಪ್ಪಣೆಯ ಮೇರೆಗೆ.

ವೇದಾಂತಾರ್ಥಸ್ತು ಸರ್ವೇಷಾಂ ನಾನಾ ಭಾತಿನಚೈಕದಾ ।
ಅತಸ್ರೇನ ಕಥಂಬ್ರಹ್ಮಜಾನಾತ್ಯಲ್ಪ ಮತಿಃ ಪುಮಾನ್ ।
ಇತಿ ಸಂಚಿತ್ಯ ಮತಿಮಾನ್ ಪುನಃ ಕಾರುಣಿಕೋತ್ತಮಃ ।
ಸೂತ್ರಯಾಮಾಸ ವೇದಾಂತವಾಕ್ಯಾರ್ಥಂ ಶಂಕರಾಜ್ಞಯಾ ॥
ಶೈವ ಏಕಾದಶ ರುದ್ರ ಸಂಹಿತಾಯಾಮ್.

ಶಿವನ ವಿಚಾರ ಬಂದೊಡನೆ ವೈಷ್ಣವರಿಗೆ ನೆನಪಿಗೆ ಬರುವುದು ರುದ್ರನ ಕೋಪದ ವಿಚಾರಮಾತ್ರ. ಇದು ಡಾಕ್ಟರರ ಮಾತು ಬಂದೊಡನೆ ಅವರ ಹರಿತವಾದ ಶಸ್ತ್ರದ ನೆನಪುಮಾತ್ರ ತಂದುಕೊಂಡಂತೆ. ಅದು ನ್ಯಾಯವಾದ ಚಿತ್ರವಲ್ಲ. ಶಿವನ ಮಂಗಳಮೂರ್ತಿಯ ವಿಚಾರವೇ ಅವರಿಗೆ ಬೇಕಾಗದಿರುವುದು ಶೋಚನೀಯ. ಅಂತೂ ಶ್ರೌತಸ್ಮಾರ್ತ ಸಂಪ್ರದಾಯದವರಾದರೂ ಈ ತರದ ಕುರುಡು ಪ್ರತಿಪಾದನೆಗೆ ಬಲಿಬೀಳಕೂಡದು.

ನಿಜವಾದ ಮೋಕ್ಷ ಬೇಕಾದವರಿಗೆ ಶಿವನು ಮಾತ್ರವೇ ಗತಿ ಎಂಬುದಕ್ಕೆ ಬಹಳ ಹಿಂದಿನಕಾಲನಲ್ಲಿ ನಮ್ಮಲ್ಲಿದ್ದ ಋಷಿವರ್ಗವೇ ಧಾರಾಳ ಸಾಕ್ಷಿ. ಇವರು ನಮ್ಮ ಮೋಕ್ಷಕಾಂಕ್ಷಕರಲ್ಲಿ ಅತ್ಯಂತ ಶ್ರೇಷ್ಠ ವರ್ಗದವರು. ಆದ್ದರಿಂದ ಸಾಯುಜ್ಯ ಮೋಕ್ಷಕ್ಕಾಗಿ ಮಾತ್ರವೇ ಯತ್ನಿಸುತ್ತಿದ್ದವರು, ಅದಕ್ಕಾಗಿ ದೇಹವೆಂಬ ಬಂಧನವನ್ನು ಸಂಪೂರ್ಣವಾಗಿ ಗೆಲಲಿಕ್ಕೆಂದು ಅವರು ಶ್ರೀವಿಷ್ಣುವಿನ ಪೂಜೆಯ ಮೂಲಕದ ರೂಪ, ಅಲಂಕಾರ, ನಾಲಗೆಯ ಚಪಲತೆ ಕೆರಳಿಸುವ ದೇವರ ಪ್ರಸಾದಗಳು ಮುಂತಾದ ದಾಂಬಿಟ್ಟು, ಕಾಡುಸೇರಿ ತೀರಾ ನಿರಾಡಂಬರ ಜೀವನ ನಡೆಸುತ್ತ ವೈರಾಗ್ಯಮೂರ್ತಿಯಾದ ಶಿವನನ್ನು ಧ್ಯಾನಿಸುತ್ತಿದ್ದರು. ಅವನ ಶುದ್ಧ ಸಾತ್ವಿಕ ವರ್ಣ, ಶಿರವ ಜಡೆ, ಮೈಯ್ಯ ಭಸ್ಮ, ಸೊಂಟದ ಚರ್ಮ, ಕಂಠದ ರುದ್ರಾಕ್ಷಿ ತನ್ಮ ಲಕ್ಷನೆಲ್ಲ ವಿರಕ್ತತೆಯಕಡೆಗೆ ಹಾಯಿಸಿ ನಿಲ್ಲಿಸಲು ಅತ್ಯಂತ ಅನುಕೂಲವಾಗಿತ್ತು. ಶಿವನು ಪತ್ನಿಯಿದ್ದವನಾದರೂ ಅವರಿಬ್ಬರೂ ಕಾಮನನ್ನು ಜೈಸಿದ ತೀರಾ ಪರಿಶುದ್ಧರು. ಶಿವ, ಪಾರ್ವತಿ, ಗಣಪತಿ, ಸುಬ್ರಹ್ಮಣ್ಯ ಶಾಸ್ತಾ, ಎಂಬ ಆ ಇಡೀ ಕುಟುಂಬರೇ ಹಣೆಯಲ್ಲಿ ಜ್ಞಾನಚಕ್ಷುವಿರುವವರು ಇವರು ಪ್ರತಿಯೊಬ್ಬರೂ ಪರಿಪೂರ್ಣ ಜ್ಞಾನಕೊಡುವ ಅದ್ಭುತ ಮೋಕ್ಷದಾಯಕ ಕುಟುಂಬದವರು.

ಧ್ಯಾನಮಗ್ನನಾದ ಶಿವನ ಮೂರ್ತಿಯೆಂದರೆ, ತನ್ನೊಳಗೇಇರುವ ಬ್ರಹ್ಮಾನಂದದಲ್ಲಿ ಸಂಪೂರ್ಣನಾಗಿ ಮುಳುಗಿದ ಸ್ವರೂಪ. ಆ ಬ್ರಹ್ಮಾನಂದದ ಅನುಭವವನ್ನು

ಇತರರೂ ತಮ್ಮ ತಮ್ಮೊಳಗೆ ಪಡೆಯಬೇಕೆಂದು ನಿರಂತರ ಕಾಂಕ್ಷೆಪಡುವ ವಿಶ್ವ ಕುಟುಂಬಿ ತನ್ನೊಳಗಿನ ಬ್ರಹ್ಮಾನಂದದ ಅನುಭವಪಡೆಯುವುದೇ ಸಾಯುಜ್ಯ ಮೋಕ್ಷದ ಸಾಧನೆಯ ಗುರಿ. ಅಜ್ಞಾನದ ನಾಶದಿಂದ ಆತ್ಮ ಜ್ಞಾನದ ಅನುಭವದಿಂದ ಇದು ಸಾಧ್ಯ. ಶಿವ ಆ ಜ್ಞಾನ ಕೊಡತಕ್ಕವ. ಚರಿತ್ರೆಯ ಅತ್ಯುತ್ತಮ ಪ್ರತಿಪಾದನೆಗೆ ಚರಿತ್ರೆಯ ಪ್ರಾಧ್ಯಾಪಕ, ಲೆಕ್ಕದ ಅತ್ಯುತ್ತಮ ಪ್ರತಿಪಾದನೆಗೆ ಲೆಕ್ಕದ ಪ್ರಾಧ್ಯಾಪಕ ಇವರು ಮಾತ್ರವೇ ಅತ್ಯಂತ ಸಮರ್ಥರಿರುವಂತೆ, ಆತ್ಮ ಬಂಧನದ ಸೃಷ್ಟಿಲಯದ ಕಾರ್ಯಕ್ಕೆ ಅಧಿಕಾರಿಯಾದ ಶಿವನು ಮಾತ್ರವೇ ಸಾಯುಜ್ಯ ಮೋಕ್ಷಕ್ಕೆ ದಾರಿ ಹೇಳಿಕೊಡುವವ. ಆದ್ದರಿಂದ ಕಲಿಯುಗದಲ್ಲಿ ಶಿವನ ಅವತಾರವಾಗಿ ಬಂದ ಶ್ರೀ ಶಂಕರಾಚಾರ್ಯರು ಸಾಯುಜ್ಯ ಮೋಕ್ಷದ ದಾರಿಯ ಬೋಧನೆಗೆ ಅದ್ವಿತೀಯ ಸಮರ್ಥತೆಯಿರುವ ಗುರುವಾಗಿ ಬಂದುದು ತೀರಾ ಸಮಂಜಸವೇ.

ಹೀಗೆ ಶಿವನೇ ಶ್ರೀಶಂಕರರಾಗಿ ಜನಿಸಿದವರು, ಕೇವಲ ಐದು ವರ್ಷಗಳಲ್ಲಿ ಎಲ್ಲ ಪುರಾಣಗಳನ್ನೂ, ಎಂಟನೆ ವರ್ಷದೊಳಗೆ, ವೇದ ಮತ್ತು ಶಾಸ್ತ್ರಗಳನ್ನೂ ಮುಗಿಸಿ, ಉಪನಿಷತ್ತುಗಳ ಸಾರವನ್ನು ಗ್ರಹಿಸಿ ಸಂಸಾರೀ ಜೀವನದ ಅಲ್ಪತೆ ಮನಗೊಂಡು. ಬ್ರಾಹ್ಮಣ ಜನ್ಮದವರಿಗೆ ಗುರಿಯಾಗಬೇಕಾದ ಸಾಯುಜ್ಯ ಮೋಕ್ಷಕ್ಕಾಗಿ ಆತ್ಮಸಾಕ್ಷಾತ್ಕಾರದ ತರಬೇತಿಗಾಗಿ ಆ ಅತಿ ಚಿಕ್ಕ ವಯಸ್ಸಿನಲ್ಲೇ ಸಂನ್ಯಾಸ ಸ್ವೀಕರಿಸಲು ನಿರ್ಧರಿಸಿದರು. ಶ್ರೀ ಮಧ್ವಾಚಾರ್ಯರು ಸಂನ್ಯಾಸಿಯಾದದ್ದು ಅವರ 25 ನೇ ವಯಸ್ಸಿನಲ್ಲಿ. ಶ್ರೀ ರಾಮಾನುಜಾಚಾರ್ಯರು ಮತ್ತು ಶ್ರೀ ಚೈತನ್ಯರು ಕೆಲವುಕಾಲ ಗೃಹಸ್ಥ ಜೀವನ ನಡೆಸಿದವರೇ. ಶ್ರೀ ವಲ್ಲಭಾಚಾರ್ಯರು ಸಂನ್ಯಾಸ ಅನಗತ್ಯ ಎಂದವರು ಶ್ರೀ ಬಸವಣ್ಣನವರು ಸಂಸಾರಿಯಾಗಿ ದೇಶದ ಮಂತ್ರಿಯಾಗಿ ಕೆಲಸ ಮಾಡಿದವರು. ಸಂನ್ಯಾಸ ನಿರ್ಧರಿಸಿದ ಶ್ರೀಶಂಕರರು ಆ ಚಿಕ್ಕ ವಯಸ್ಸಿನಲ್ಲಿ ಅತ್ಯುತ್ತಮ ಗುರುವನ್ನು ಹುಡುಕಿಕೊಂಡು ಕೇರಳದಿಂದ ಸಾವಿರಾರು ಮೈಲು ದೂರವಿದ್ದ ನರ್ಮದಾತೀರಕ್ಕೆ ಹೋದರು, ಎಂಬರೆ ಆಶ್ಚರ್ಯವಾಗುತ್ತದೆ. ಅವರ ಜೀವನದಲ್ಲಿ ಇದೊಂದು ಅತ್ಯಂತ ಮಹತ್ತಿನ ಘಟನೆಯಾದ್ದರಿಂದ, ಅದರ ಅರ್ಥಮಾಡಿಕೊಳ್ಳುವುದು ಅಗತ್ಯ.

ಅವರ ಕಾಲದಲ್ಲಿ ಬ್ರಾಹ್ಮಣ ವಿದ್ಯಾರ್ಥಿಗಳಿಗೆ ವೇದ ಮತ್ತು ಶಾಸ್ತ್ರ ಕಲಿಸಲಿಕ್ಕೂ ಸಂನ್ಯಾಸ ಅಪೇಕ್ಷಿಸುವವರಿಗೆ ದೀಕ್ಷೆ ಕೊಡಲಿಕ್ಕೂ ಗುರುಗಳನ್ನು ಹುಡುಕಿಕೊಂಡು ಬಹಳದೂರ ಹೋಗಬೇಕಾಗಿರಲಿಲ್ಲ ಶ್ರೀ ಶಂಕರರಿಗೆ ವೇದ ಕಲಿಸಲಿಕ್ಕೆ ಹತ್ತಿರವೇ ಆಚಾರ್ಯರು ಸಿಕ್ಕಿದ್ದರು. ಶ್ರೀ ಮಧ್ವಾಚಾರ್ಯರಿಗೆ ಸಂನ್ಯಾಸ ಕೊಡಲಿಕ್ಕೂ ಅತಿ ಹತ್ತಿರದಲ್ಲೇ ಅಚ್ಯುತ ಪ್ರೇಕ್ಷರೆಂಬುವರು ಸಿಕ್ಕಿದ್ದರು. ಶ್ರೀ ರಾಮಾನುಜಾಚಾರ್ಯರಿಗೆ ಮಂತ್ರೋಪದೇಶ ಕೊಟ್ಟ ಗೋಷ್ಠಿಪೂರ್ಣರೂ, ಶ್ರೀ ಚೈತನ್ಯರಿಗೆ ಸಂನ್ಯಾಸ

ಕೊಟ್ಟ ಕೇಶವ ಭಾರತಿಯೂ, ಸಮೀಪದಲ್ಲೇ ಸಿಕ್ಕಿದವರು. ಶ್ರೀ ಶಂಕರಾಚಾರ್ಯರ ಕಾಲದಲ್ಲಿ, ಈ ಇತರ ಆಚಾರ್ಯರ ಕಾಲಕ್ಕಿಂತ ದೂರ ಪ್ರಯಾಣ ಮತ್ತಷ್ಟು ಕಷ್ಟವಾಗಿದ್ದಿರಬೇಕು. ದೇಶದ ಅನೇಕ ಕಡೆಗಳಲ್ಲಿ ವಿಸ್ತಾರವಾದ ದಟ್ಟವಾದ ಕಾಡುಗಳು ಬೆಳೆದಿದ್ದವು. ಕಳ್ಳಕಾಕರ ಭಯ, ದುಷ್ಟ ಪ್ರಾಣಿಗಳ ಭಯ, ಆಹಾರಕ್ಕೆ ವಿಶ್ರಾಂತಿಗೆ ಹಳ್ಳಿಗಳು ತೀರಾ ದೂರದೂರ ಇದ್ದದ್ದು, ಶ್ರೀಶಂಕರರ ಅತಿ ಚಿಕ್ಕ ವಯಸ್ಸು, ನದಿ ಗುಡ್ಡ ಕಾಡು ಪರ್ವತಗಳನ್ನು ದಾಟುತ್ತ ತಿಂಗಳುಗಟ್ಟಲೆ ಪ್ರಯಾಣ ಬೆಳೆಸಬೇಕಾದ ಅವಶ್ಯಕತೆ, ಎಲ್ಲಿ ಶ್ರೀಶಂಕರರನ್ನು ಎದುರಿಸಿದ್ದರೂ. ಅವರು ಅವನ್ನೆಲ್ಲ ಎದುರಿಸಿ ಜೀವನ್ಮುಕ್ತರೆಂದು ಪ್ರಖ್ಯಾತರಾದ ಗೋವಿಂದ ಭಗವತ್ಪಾದರಿಂದ ಮಾತ್ರವೇ ಸಂನ್ಯಾಸ ಪಡೆಯಬೇಕೆಂಬ ನಿರ್ಧಾರದಿಂದ ತಮ್ಮ ಯಾತ್ರೆ ಸಾಗಿಸಿದ್ದರು

ಏಕೆಂದರೆ ಅವರಿಗೆ ಬೇಕಾದುದು ಕೇವಲ ಸಾಂಪ್ರದಾಯಿಕ ಕ್ರಮದಲ್ಲಿ ಕಾಷಾಯದ ಬಟ್ಟೆ ಉಡಿಸಿ ಸಂನ್ಯಾಸಕೊಡುವ ಸಾಮಾನ್ಯ ಗುರುವಲ್ಲ; ಆತ್ಮಸಾಕ್ಷಾತ್ಕಾರ ಹೊಂದುವ ಮಟ್ಟಕ್ಕೆ ಅವರನ್ನು ಏರಿಸುವ ಯೋಗ್ಯತೆಯುಳ್ಳ ಗುರು ಮಾತ್ರ. ಒಂದು ಉರಿಯುತ್ತಿರುವ ದೀಪ ಮಾತ್ರವೇ ಮತ್ತೊಂದನ್ನು ಹೊತ್ತಿಸಲು ಸಮರ್ಥವಾಗುವಂತೆ, ತಾವು ಆತ್ಮ ಸಾಕ್ಷಾತ್ಕಾರ ಮಾಡಿಕೊಂಡ ಗುರು ಮಾತ್ರವೇ ಇನ್ನೊಬ್ಬ ಯೋಗ್ಯ ಶಿಷ್ಯನಲ್ಲಿ ಆ ಅನುಭವಪ್ರೇರಿಸಲು ಸಮರ್ಥರು ಅಂಥ ಗುರುಗಳು ತೀರಾ ವಿರಳ. ಆದರೆ ಸಾಯುಜ್ಯ ಮುಕ್ತಿಯ ತರಬೇತಿಗೆ ಗುರುಗಳು ಬೇಕೇಬೇಕು ಅವರ ಅವಶ್ಯಕತೆಯನ್ನು ಯಮನು ನಚಿಕೇತನಿಗೆ ಕಠೋಪನಿಷತ್ತಿನಲ್ಲಿ (1-2-8) ವಿವರಿಸಿದ್ದಾನೆ 'ನ ನರೇಣಾವರೇಣ ಪ್ರೋಕ್ತ ಏಷ ಸುವಿಜ್ಞೇಯೋ ಬಹುಧಾ ಚಿಂತ್ಯಮಾನಃ। ಅನನ್ಯ ಪ್ರೋಕ್ತೇ ಗತಿರತ್ರ ನಾಸ್ತ್ಯಣೀಯಾನ್ ಹ್ಯತರ್ಕ್ಯಮಣುಪ್ರಮಾಣಾತ್ ॥ ಎಂದರೆ, ಕೆಳಮಟ್ಟದವನಿಂದ ಬೋಧಿಸಲ್ಪಟ್ಟರೆ (ಬ್ರಹ್ಮದ) ನಿಜತ್ವವನ್ನು ತಿಳಿಯಲು ಸಾಧ್ಯವಲ್ಲ ಏಕೆಂದರೆ ಹಲವು ವಿಧಗಳಲ್ಲಿ ಚಿಂತಿಸುತ್ತಾರೆ. ಅವನೇ (ಎಂದರೆ ಬ್ರಹ್ಮವೇ) ತಾನು ಎಂದು ಯಾರು ತಿಳಿದಿರುವನೋ ಅವನಿಂದ ಬೋಧಿಸಲ್ಪಡದಿದ್ದರೆ ಅಲ್ಲಿಗೆ ಹೋಗುವಂತಿಲ್ಲ ಏಕೆಂದರೆ ಅವನು ಸೂಕ್ಷ್ಮಕ್ಕಿಂತ ಸೂಕ್ಷ್ಮನಾಗಿದ್ದಾನೆ, ಎಂಬುದು ಯಮನ ಬೋಧೆ ಶ್ರೀಶಂಕರಾಚಾರ್ಯರೇ ಆಮೇಲೆ ತಮ್ಮ ವಿವೇಕ ಚೂಡಾಮಣಿಯಲ್ಲಿ (33) ಶಿಷ್ಯನಲ್ಲಿ ಆತ್ಮಜ್ಞಾನವನ್ನು ಸ್ಫುರಿಸಲಾಪ ಗುರುವಿನ ಯೋಗ್ಯತೆಯನ್ನು ವರ್ಣಿಸುತ್ತ ಹೇಳಿದ್ದಾರೆ.

ಶ್ರೋತ್ರಿಯೋಽವೃಜಿನೋಽಕಾಮಹತೋ ಯೋ ಬ್ರಹ್ಮವಿತ್ತಮಃ ॥

ಆ (ಗುರುವು) ಶ್ರೋತ್ರೀಯನೂ (ಎಂದರೆ ಶಾಸ್ತ್ರವನ್ನೆಲ್ಲ ಸಾಂಪ್ರದಾಯಿಕ ರೀತಿಯಲ್ಲಿ ಕಲಿತ ಬ್ರಾಹ್ಮಣನೂ) ಪಾಪರಹಿತನೂ, ಕಾಮದ ಹೊಡೆತವಿಲ್ಲದವನೂ, ಬ್ರಹ್ಮವನ್ನರಿತವರಲ್ಲಿ ಶ್ರೇಷ್ಠನೂ (ಏಕೆಂದರೆ ಅವರೆಲ್ಲರೂ ಶಿಷ್ಯರನ್ನು ತರಬೇತುಮಾಡಲಾಪ ಸಮರ್ಥತೆಯುವರಲ್ಲ ) ಆಗಿರಬೇಕು

ಕಳೆದ ಶತಮಾನದಲ್ಲಿ ಶ್ರೀ ರಾಮಕೃಷ್ಣ ಪರಮಹಂಸರಲ್ಲಿ ಬ್ರಹ್ಮಜ್ಞಾನವನ್ನು ಸ್ಫುರಿಸಲಿಕ್ಕೆಂದು ಅವರು ನಂಬಿದ್ದ ಕಾಳೀ ದೇವಿಯು ಅವರಿದ್ದಲ್ಲಿಗೆ ಪರಂಪರಾನುಗತ ವಾಗಿ ಬ್ರಹ್ಮ ಜ್ಞಾನಿಗಳಿಂದ ಬಂದ ಬ್ರಹ್ಮಜ್ಞಾನವನ್ನು ತಾನೂ ಪಡೆದು ಅನುಭವಕ್ಕೆ ತಂದುಕೊಂಡಿದ್ದ ತೋತಾಪುರಿಯೆಂಬ ಸಂನ್ಯಾಸಿಯನ್ನು ದಕ್ಷಿಣೇಶ್ವರಕ್ಕೆ ಆಕರ್ಷಿಸಿ ಅವರಿಂದ ಶ್ರೀರಾಮಕೃಷ್ಣ ಪರಮಹಂಸರಿಗೆ ದೀಕ್ಷೆ ಕೊಡಲು ಪ್ರೇರಿಸಿದ್ದಳು. ತನ್ಮೂಲ ಮಾತ್ರವೇ ಅವರಿಗೆ ಆತ್ಮಸಾಕ್ಷಾತ್ಕಾರ ಸಾಧ್ಯ ಮಾಡಿದಳು! ಆ ಮೇಲೆ ಬ್ರಹ್ಮಾನು ಭವವು ಅವರಿಗೆ ಆಗಾಗ ಅವರ ನಿರ್ವಿಕಲ್ಪ ಸಮಾಧಿಯಲ್ಲಿ ಸಿಕ್ಕುವಂತೆ ಮಾಡಿದ್ದಳು.

ಆದರೆ ಅವತಾರ ಪುರುಷರೇ ಆದ ಆಚಾರ್ಯರಿಗೂ ಈ ಶರ್ತ ಅನ್ವಯಿಸುತ್ತದೆಯೇ ಎಂದರೆ, ಶ್ರೀರಾಮಕೃಷ್ಣ ಪರಮಹಂಸರೂ ಅವತಾರ ಪುರುಷರೇ ಆಗಿದ್ದರು. ದೇವರ ಅವತಾರವಾದ ಶ್ರೀರಾಮನು ಈ ಅನುಭವಕ್ಕೆ ವಸಿಷ್ಠರನ್ನು ಹೊಂದಿದ್ದನು. ಶ್ರೀಕೃಷ್ಣನು ಬ್ರಹ್ಮಜ್ಞಾನಿ ಸಾಂದೀಪನಿಗಳಿಂದ ತನ್ನ ಬ್ರಹ್ಮಜ್ಞಾನ ಪಡೆದಿದ್ದನು. ಎಂದರೆ ಉಪನಿಷತ್ತು ಹೇಳುವ ಈ ದಾರಿ ಎಲ್ಲರಿಗೂ ತಪ್ಪದೆ ಅನ್ವಯಿಸಬೇಕು ಎಂದಾಯಿತು.

ಆದರೆ ಇಲ್ಲಿ ಪ್ರಾಯಶಃ ಒಂದು ವಿವರಣೆ ಅಗತ್ಯ. ಈ ತರದ ಬ್ರಹ್ಮ ಜ್ಞಾನೀ ಗುರುವು ಬೇಕಾಗುವುದು ನಿ ರ್ಗು ಣ ಬ್ರಹ್ಮದ ಸಾಕ್ಷಾತ್ಕಾರಕ್ಕೆ ಮಾತ್ರ; ಸಗುಣರೂಪದ ದೇವರ ಸಾಕ್ಷಾತ್ಕಾರಕ್ಕೆ ಅದು ಅಗತ್ಯವಲ್ಲ ಎಂಬುದಕ್ಕೂ ಶ್ರೀಕೃಷ್ಣ ಪರಮಹಂಸರೇ ಉತ್ತಮ ದೃಷ್ಟಾಂತ. ತೋತಾಪುರಿಯಿಂದ ಅವರು ದೀಕ್ಷೆ ತೆಗೆದುಕೊಳ್ಳುವ ಮುಂಚೆಯೇ ಅವರಿಗೆ ಕಾಳೀದೇವಿಯ ಸಾಕಾರ ರೂಪಗಳ ಸಾಕ್ಷಾತ್ಕಾರವು ಪುನಃ ಪುನಃ ಆಗಿತ್ತು. ಶ್ರೀ ಶಂಕರಾಚಾರ್ಯರು ಬ್ರಹ್ಮಾನುಭವವನ್ನು ಹೊಂದಿದವರಾದ್ದರಿಂದಲೇ ಪರಬ್ರಹ್ಮದ ವಿಚಾರ ತುಂಬಾ ಬರುವ ಉಪನಿಷತ್ತುಗಳ, ಬ್ರಹ್ಮಸೂತ್ರದ ಮತ್ತು ಭಗವದ್ಗೀತೆಯ ಅತ್ಯಂತ ಸಮರ್ಪಕವಾದ ಭಾಷ್ಯಗಳನ್ನು ಕೇವಲ ತಮ್ಮ ಅನುಭವದ ಬೆಂಬಲದಮೇಲೆಯೇ ಬರೆಯಲು ಸಮರ್ಥರಾದರು ಸ್ವಂತ ಅನುಭವದ ಎದುರಲ್ಲಿ ಅದಿಲ್ಲದವರ ವಾದವು ನಿಲ್ಲಲಾರದು ಎಂದೂ ಅವರು ಹೇಳಿದ್ದಾರೆ.

ಹೀಗೆ ಸಾಯುಜ್ಯ ಮೋಕ್ಷದ ದಾರಿಯ ಬೋಧನೆಗೆ ಅಧಿಕಾರ ಹೊಂದಿದ ಆಚಾರ್ಯರು ಶ್ರೀಶಂಕರಾಚಾರ್ಯರು ಮಾತ್ರ. ಆದ್ದರಿಂದ ಅವರು ಇತರ ಆಚಾರ್ಯರಿಗಿಂತ ತೀರಾ ಪ್ರತ್ಯೇಕತೆಯ ಮಟ್ಟದವರು.

—

## ೩. ಜಗತ್ತಿನ ಏಕಮಾತ್ರ ಜಗದ್ಗುರು ಶ್ರೀ ಶಂಕರಾಚಾರ್ಯರು ಮಾತ್ರವೇ.

ದೈವೀಮಟ್ಟದ ಮತ್ತು ಮತ ನಿರ್ಮಾಣಕಾರ್ಯದ ಆಚಾರ್ಯರು ಅವತರಿಸ ಬೇಕಾದುದು ಧರ್ಮಕ್ಕೆ ತುಂಬಾ ಗ್ಲಾನಿ ಬಂದಾಗ ಮತ್ತು ಧರ್ಮದ ಉದ್ಧಾರವು ಅವರಿಂದ ನಡೆಯಲಿಕ್ಕಿದ್ದಾಗ, ಸನಾತನ ಧರ್ಮ ಗ್ಲಾನಿ ಎಂದರೆ ಭರತ ಭೂಮಿಯ ಯಾವ ವಿಶಾಲವಾದ ಭಾಗದಲ್ಲಾದರೂ, ಅಥವಾ ಇಡೀ ದೇಶದಲ್ಲಿ, ಅದಕ್ಕೆ ಬಂದ ಹಾನಿ. ಇಡೀ ದೇಶದಲ್ಲಿ ಧರ್ಮಕ್ಕೆ ಹಾನಿ ಬಂದಾಗ ಕೇವಲ ಅದರ ಒಂದು ಭಾಗದಲ್ಲಿ ಅದರ ಉದ್ಧಾರಮಾಡುವುದು ಧರ್ಮದ ಉದ್ಧಾರವಾಗದು. ಇಡೀ ದೇಹಕ್ಕೆ ರೋಗ ಬಂದಾಗ ಅದರ ಒಂದು ಭಾಗ ಮಾತ್ರ ಗುಣವಾಗುವ ತರದ ಚಿಕಿತ್ಸೆಯಿಂದ ಸಮರ್ಥ ವೈದ್ಯನಿಗೆ ತೃಪ್ತಿಯಾಗದು; ದೇಹಕ್ಕೂ ಬೇಕಾದ ಪ್ರಯೋಜನ ಸಿಕ್ಕದು.

ಶ್ರೀ ಶಂಕರಾಚಾರ್ಯರ ಕಾಲದಲ್ಲಿ ಸನಾತನ ಧರ್ಮಕ್ಕೆ ಇಡೀ ದೇಶದಲ್ಲಿ ತೊಡಕು ಬಂದಿತ್ತು, ಧರ್ಮದ ಹೊರ ಶತ್ರುವಾಗಿ ಬೌದ್ಧರು ಸಾವಿರಾರು ವರ್ಷ ಕಾಲದ ಬೆಳವಣಿಗೆಯ ಬಲದಿಂದ ನಮ್ಮ ಧರ್ಮವನ್ನು ತುಂಬಾ ಕ್ಷೀಣಮಾಡಿದ್ದರು ನಮ್ಮ ಧರ್ಮದ ಒಳರೋಗವಾಗಿ ಅದರಲ್ಲಿ 72 ಭಿನ್ನಪಂಥಗಳು ಬೆಳೆದಿದ್ದವು. ಧಾರ್ಮಿಕ ಸಮಾಜದಲ್ಲಿ ಅಪಾರಮಟ್ಟದ ಒಡಕು, ಒಳದ್ವೇಷ, ದುರ್ಬಲತೆ ತುಂಬಿತ್ತು ಧರ್ಮಾಚರಣೆಗಳು ತುಂಬಾ ಕೆಟ್ಟುಹೋಗಿ ಕಾಪಾಲಿಕರು, ಭೈರವರು, ವಾಮಾ ಚಾರಿಗಳು ತುಂಬಾ ಹೀನತರದ, ಅವೈದಿಕತರದ ಆಚಾರಗಳನ್ನು ಅಭ್ಯಾಸಿಸುತ್ತಿದ್ದರು ಧರ್ಮದ ಉದ್ಧಾರವಾಗಬೇಕಾದರೆ ಈ ಎರಡುತರದ ದೋಷಗಳ ಪರಿಹಾರವೂ ನಡೆಯಬೇಕಿತ್ತು.

ಇಡೀ ದೇಶದಲ್ಲೇ ಧರ್ಮದಗ್ಲಾನಿ ನಡೆಯುತ್ತಿದ್ದುದರಿಂದ ಶ್ರೀ ಶಂಕರಾ ಚಾರ್ಯರು ಇಡೀ ಭಾರತವನ್ನೇ ತಮ್ಮ ಕಾರ್ಯಕ್ಷೇತ್ರವಾಗಿ ಮಾಡಿಕೊಂಡರು. ಧರ್ಮದ ಹೊರ ಶತ್ರು ಮತ್ತು ಒಳರೋಗ ಎರಡನ್ನೂ ಅತ್ಯಂತ ಸಮರ್ಥತೆಯಿಂದ ಎದುರಿಸಿದರು. ಸಾಮ್ರಾಟನಾಗಬೇಕೆಂದಿರುವ ರಾಜನು ಸಮರ್ಥ ರಾಜರುಗಳನ್ನೇ ಆರಿಸಿ, ಎದುರಿಸಿ, ಸೋಲಿಸಿ ಅವರ ಅಪಾರ ರಾಜ್ಯವನ್ನು ಸೇರಿಸಿಕೊಳ್ಳುತ್ತಹೋಗಿ ಬೇಗ ಇಡೀ ದೇಶವನ್ನು ವಶಮಾಡಿಕೊಳ್ಳುವಂತೆ ಧರ್ಮವಿರೋಧಿಗಳಲ್ಲಿ ಅತ್ಯಂತ ಪ್ರಬಲರಾದ ಮುಖಂಡರನ್ನೇ ಆರಿಸಿ ಅವರನ್ನು ಜೈಸಿ ತಮ್ಮ ಧಾರ್ಮಿಕ ದಿಗ್ವಿ ಜಯವನ್ನು ನಡೆಸಿ ಇಡೀ ದೇಶದಲ್ಲಿನ ಅಧರ್ಮದ ನಾಶ ಸಾಧಿಸಿದರು. ಸಂಚಾರದ ಅನುಕೂಲತೆಗಳು ತೀರಾ ಕಡಿಮೆಯಿದ್ದ ಆ ಕಾಲದಲ್ಲೂ ಅವರು ಈ ಮಹತ್ತರದ ಕಾರ್ಯಕ್ಕಾಗಿ ಇಡೀ ದೇಶವನ್ನು ತುದಿಯಿಂದ ತುದಿಯವರೆಗೆ ಅವರ ಪ್ರಚಾರ

ಕ್ಕಿದ್ದ ಕೇವಲ 16 ವರ್ಷಗಳಲ್ಲಿ ಎರಡು ಸಾರಿಯಾದರೂ ಖಂಡಿತ ಸಂಚರಿಸಿದ್ದರೆಂದರೆ, ನಮಗೆ ಪರಮಾಶ್ಚರ್ಯವಾಗುತ್ತದೆ.

ಶ್ರೀ ಶಂಕರಾಚಾರ್ಯರು ಬುದ್ಧರನ್ನು ಸಂಪೂರ್ಣವಾಗಿ ಸೋಲಿಸಿದ್ದು ಮಾತ್ರವಲ್ಲ, ಈ ಧರ್ಮವೇ ಹಿಂದೂದೇಶದಲ್ಲಿ ಆಮೇಲೆ ನಿರ್ನಾಮವಾಗುವಂತೆ ಮಾಡಿದರು. ಎಂಥ ಅತ್ಯದ್ಭುತ ಕಾರ್ಯ! ಅಂತೆಯೇ ದೇಶದ ಎಲ್ಲ ಕಡೆಗಳಲ್ಲೂ ಹಿಂದೂ ಧರ್ಮದ ತಪ್ಪು ಆಚರಣೆಗಳು ಮಾಯಕವಾಗುವಂತೆ ಮಾಡಿದರು. ಶ್ರೇಷ್ಠವಾದ ಶ್ರೌತಸ್ಮಾರ್ತ ಆಶ್ರಮಗಳೇ ಎಲ್ಲೆಲ್ಲೂ ಪುನಃ ಧಾರಾಳವಾಗಿ ಆಚರಣೆಗೆ ಬರುವಂತಾದವು ಹೀಗೆ ಅತಿಚೆನ್ನಾಗಿ ಪುನರುದ್ಧರಿಸಲ್ಪಟ್ಟ ನಮ್ಮ ಸನಾತನ ಧರ್ಮವು ಆಮೇಲೆ ಹಲವು ಶತಮಾನಗಳವರೆಗೂ ಚೆನ್ನಾಗಿ ಬಾಳಿಬಂತು.

ಹತ್ತನೆಯ ಶತಮಾನದ ನಂತರ ಪುನಃ ನಮ್ಮ ಧರ್ಮಕ್ಕೆ ಹಾನಿ ಬರಲಾರಂಭವಾಯಿತು. ಅದರ ಹೊರ ಶತ್ರುವಾಗಿ ಮುಸುಲ್ಮಾನರ ಹಾವಳಿ ಆರಂಭವಾಯಿತು ಒಳರೋಗವಾಗಿ ರಾಜರ ಆಶ್ರಯ ತಪ್ಪಿದ್ದರಿಂದ ಸಂಸ್ಕೃತದ ಅಭ್ಯಾಸ, ಬ್ರಾಹ್ಮಣ್ಯಕ್ಕೆ ಬೆಂಬಲ, ಗುರುಕುಲಗಳ ಸೌಲಭ್ಯ, ಧರ್ಮ ಪ್ರಚಾರಕ್ಕೆ ಪ್ರೋತ್ಸಾಹ ಕ್ಷೀಣಿಸಿದವು. ಪ್ರಾಯಶಃ ಜನರ ಆರ್ಥಿಕ ಸಮಸ್ಯೆಗಳೂ ಹೆಚ್ಚಿ ಧರ್ಮದ ಆಚರಣೆ ಕಷ್ಟವಾಗುತ್ತ ಬಂದಿರಬೇಕು. ಅನಂತರ ದೇಶದಲ್ಲಿ ಹಲವು ಹೊಸ ಆಚಾರ್ಯರು ಉದ್ಭವಿಸಿ, ಅವರು ಸನಾತನ ಧರ್ಮದ ಬಹಳ ಕಾಲದಿಂದ ಬಂದಿದ್ದ ಆಚರಣೆಗಳನ್ನು ಉತ್ತಮ ಮಾಡುತ್ತೇವೆಂದು ಬದಲಾಯಿಸಿದವರೇ ಆದರೂ ಇವರದ್ದು ತಿದ್ದುಪಡಿ ಒಬ್ಬೊಬ್ಬರದ್ದು ಒಂದೊಂದು ತರದ್ದಿತ್ತು. ಪ್ರತಿ ಆಚಾರ್ಯರೂ ತಮ್ಮ ತಿದ್ದುಪಡಿ ಮಾತ್ರವೇ ಅತ್ಯಂತ ಶ್ರೇಷ್ಠತರದ್ದು ಎಂದು ಭಾವಿಸಿದವರಾದರೂ, ಅದನ್ನು ಇಡೀ ದೇಶದಲ್ಲೆಲ್ಲ ಹಬ್ಬಿಸಿ ಸನಾತನ ಧರ್ಮವನ್ನು ಅದರ ಸಂಪೂರ್ಣ ವಿಸ್ತಾರ ಕ್ಷೇತ್ರದಲ್ಲಿ.ಉದ್ಧಾರ ಮಾಡಬೇಕೆಂಬ ಮನಃಪೂರ್ವಕತೆಯಿಂದ ಅವರ್‍ಯಾರೂ ಕೆಲಸ ಮಾಡಿದವರೇ ಅಲ್ಲ. ಕೇವಲ ಮಿತವಾದ, ತಮಗೆ ಹೆಚ್ಚು ತೊಡಕಿಲ್ಲದ, ಕ್ಷೇತ್ರಗಳನ್ನೇ ಆರಿಸಿ ಅಲ್ಲಿಮಾತ್ರ ಕೆಲಸಮಾಡಿ ತೃಪ್ತರಾದ ಇವರು ತನ್ಮೂಲಕ ತಮ್ಮ ಕಿರಿಯ ಮಟ್ಟವನ್ನು ತಾವೇ ಧಾರಾಳವಾಗಿ ವ್ಯಕ್ತಪಡಿಸಿದವರಾಗಿದ್ದಾರೆ.

ಶ್ರೀ ರಾಮಾನುಜಾಚಾರ್ಯರ ಧರ್ಮಪ್ರಚಾರ ಕೆಲಸವು ಬಹುಮಟ್ಟಿಗೆ ತಮಿಳುನಾಡಲ್ಲಿ ಮತ್ತು ಸ್ವಲ್ಪಮಾತ್ರವಾಗಿ ಕರ್ನಾಟಕದಲ್ಲಿ ನಡೆಯಿತು ಶ್ರೀ ಮಧ್ವಾಚಾರ್ಯರ ಪ್ರಚಾರಕಾರ್ಯ, ಶ್ರೀ ಬಸವಣ್ಣನವರ ಪ್ರಚಾರಕಾರ್ಯ, ಮುಖ್ಯವಾಗಿ ಕರ್ನಾಟಕದಲ್ಲಿ ನಡೆಯಿತು. ಶ್ರೀ ಬಸವಣ್ಣನವರು ಕೇವಲ ಕರ್ನಾಟಕದಲ್ಲಿ ಶಿವಭಕ್ತಿ ಬೆಳೆಸಲಿಕ್ಕೆಂದೇ ಜನ್ಮವೆತ್ತಿದರು ಎಂದೂ ಕತೆ ಇದೆ. ಆದರೆ ಅವರೂ ಇಡೀ ಕರ್ನಾಟಕದಲ್ಲಿ ಕೂಡ ಈ ಕೆಲಸ ಮಾಡಿದವರಲ್ಲ. ಶ್ರೀ ವಲ್ಲಭಾಚಾರ್ಯರು ತಮ್ಮ ಪ್ರಚಾರಕಾರ್ಯ

ವನ್ನು ಮುಖ್ಯವಾಗಿ ರಾಜಸ್ಥಾನ ಮತ್ತು ಗುಜರಾತುಗಳಲ್ಲಿ ನಡೆಯಿಸಿದರು. ಶ್ರೀ ಚೈತನ್ಯರ ಕ್ಷೇತ್ರ ಬಹುಮಟ್ಟಿಗೆ ಬಂಗಾಳ, ಶ್ರೀ ನಿಂಬಾರ್ಕರ ಪ್ರಚಾರ ಮಥುರೆಯ ಬಳಿ ಮತ್ತು ಪಶ್ಚಿಮದಲ್ಲಿ ಹೆಚ್ಚು ನಡೆಯಿತು. ಉತ್ತರ ಹಿಂದುಸ್ಥಾನದ ಈ ಪಂಥಗಳ ಹೆಸರುಗಳು ಕೂಡ ದಕ್ಷಿಣ ಭಾರತಕ್ಕೆ ಪರಿಚಿತವಲ್ಲ. ಉತ್ತರದ ಆಚಾರ್ಯರು ಅತ್ಯಂತ ಮಹತ್ತಿನದೆಂದು ಪ್ರಚಾರಕ್ಕೆ ತಂದ ಶ್ರೀರಾಧೆಯ ಕೃಷ್ಣಪ್ರೇಮವು ಸಾಂಪ್ರದಾಯಿಕ ಕ್ರಮದ ದಕ್ಷಿಣದವರಿಗೆ ಉತ್ಸಾಹ ಉಂಟುಮಾಡಿದ್ದಿಲ್ಲ !

ಇನ್ನು ಈ ಹೊಸ ಆಚಾರ್ಯರಾದರೂ ತಾವು ಆರಿಸಿದ ಸುಲಭಕ್ಷೇತ್ರಗಳಲ್ಲಿ ಅಲ್ಲಿನ ಎಲ್ಲ ಹಿಂದುಗಳನ್ನೂ ತಮ್ಮ "ಉತ್ತಮ" ಮತಕ್ಕೆ ಗೆದ್ದವರೂ ಅಲ್ಲ. ಅನೇಕ ಕಡೆಗಳಲ್ಲಿ ಹೆಚ್ಚಿನ ಜನರು ಇವರ ಹೊಸದಾರಿ ಒಪ್ಪದಾದರು. ತಮ್ಮ ಮತ ದವರಲ್ಲದವರನ್ನು ಮತಾಂತರ ಮಾಡುವುದು ಅತಿ ಕಷ್ಟದ ಕೆಲಸ. ಶ್ರೀ ಶಂಕರಾ ಚಾರ್ಯರು ಬುದ್ಧರನ್ನೆಲ್ಲ ಗೆದ್ದು ಹಿಂದೂ ಧರ್ಮಕ್ಕೆ ಒಲಿಸಿಕೊಂಡ ಅದ್ಭುತ ಸಾಹಸಿಗಳು. ಆದರೆ ಈ ಹೊಸ ಆಚಾರ್ಯರೆಲ್ಲ ಮಾಡಿದ ಕಾರ್ಯವೆಂದರೆ ಶಿವ, ವಿಷ್ಣು ಇಬ್ಬರನ್ನೂ ಅಂದಿನವರೆಗೆ ಪೂಜಿಸುತ್ತ ಬಂದಿದ್ದವರಿಗೆ ವಿಷ್ಣುವನ್ನು ಮಾತ್ರವೇ ಪೂಜಿಸಿರಿ ಶಿವನನ್ನು ತಾತ್ಸರಿಸಿರಿ, ಎಂದುದು; ಅಥವಾ ಶಿವನನ್ನು ಮಾತ್ರವೇ ಪೂಜಿಸಿರಿ ವಿಷ್ಣುವನ್ನು ತಾತ್ಸರಿಸಿರಿ. ಎಂದುದು ಇದು ಆಚಾರ್ಯ ಮಟ್ಟದ ಸಮರ್ಥತೆಯ ಅದ್ವಿತೀಯ ಪ್ರದರ್ಶನವಲ್ಲ.

ಇನ್ನು ನಮ್ಮ ಧರ್ಮಕ್ಕೆ ಇಡೀ ದೇಶದಲ್ಲಿ ಅತ್ಯಂತ ಹೆಚ್ಚಿನ ಹಾನಿತರುತ್ತಿದ್ದ ಮುಸಲ್ಮಾನ ಧರ್ಮವೆಂಬ ಭಯಂಕರ ಶತ್ರುವಿನ ಬಗ್ಗೆ ಈ ಯಾವ ಹೊಸ ಆಚಾರ್ಯರೂ ನಮ್ಮ ಧರ್ಮಕ್ಕೆ ರಕ್ಷಣ ಇತ್ತವರೇ ಅಲ್ಲ ಅವರಿಗೆ ಹಿಂದೂ ಧರ್ಮದ ಹಿರಿಮೆ ವಿವರಿಸಿ, ಅಥವಾ ಅದರ ಅದ್ಭುತಶಕ್ತಿ ಪ್ರದರ್ಶಿಸಿ, ಮುಸಲ್ಮಾನರು ಹಿಂದುಗಳ ಧಾರ್ಮಿಕ ಅಭ್ಯಾಸಗಳಿಗೆ ಹಿಂಸೆ ಕೊಡದಂತೆ ಕೂಡಮಾಡಿದವರಲ್ಲ. ಆದ್ದರಿಂದ ಈ ಹೊಸ ಆಚಾರ್ಯರ್ಯಾರೂ ಹಿಂದೂ ಧರ್ಮದ ಪುನರುದ್ಧಾರ ಭದ್ರವಾಗಿ ನಡೆಸಿದ ಅವತಾರಶ್ರೇಷ್ಠರೆನ್ನುವಂತಿಲ್ಲ. ಆ ಅದ್ವಿತೀಯ ಹಿರಿಮೆ ಶ್ರೀ ಶಂಕರಾ ಚಾರ್ಯರದ್ದು ಮಾತ್ರ !

ಧರ್ಮದ ರಕ್ಷಣೆಗಾಗಿ ಬುದ್ಧರನ್ನು ಎದುರಿಸುವ ಬಗ್ಗೆ ಮುಸಲ್ಮಾನರನ್ನೇ ಎದುರಿಸಬೇಕಾದ ಸಮಸ್ಯೆ ಶ್ರೀ ಶಂಕರಾಚರ್ಯ್ಯರನ್ನೇ ಬಾಧಿಸಿದ್ದರೆ, ಆಗಲೂ ಅವರು ಜಯಶೀಲರಾಗುತ್ತಿದ್ದರೇ ಎಂಬ ಪ್ರಶ್ನೆ ಬರುತ್ತದೆ. ಅವರಿಗೆ ಅದು ಸಾಧ್ಯವಾಗು ತ್ತಿತ್ತು ಎಂದೇ ಊಹಿಸಬೇಕಾಗುತ್ತದೆ. ಕೇವಲ 16 ವರ್ಷಗಳಲ್ಲಿ ಬುದ್ಧ ಧರ್ಮ ವನ್ನು ಸಂಪೂರ್ಣವಾಗಿ ನಾಶಮಾಡಿದ, ಹಿಂದೂ ಧರ್ಮಗಳ ಅನಾಚಾರಗಳನ್ನು

ಸಂಪೂರ್ಣ ಅಳಿಸಿದ ಅತ್ಯದ್ಭುತ ಕಾರ್ಯ ಸ್ವಯಂ ಭಗವಂತನೊಬ್ಬನಿಂದಲ್ಲದೆ ಮತ್ಯಾರಿಂದಲೂ ಸಾಧ್ಯವಲ್ಲ. ಆ ಭಗವಂತನಿಗೆ ಯಾವ ಕಾರ್ಯ ಅಸಾಧ್ಯ ?

ಬುದ್ಧರು ಶ್ರೀ ಶಂಕರಾಚಾರ್ಯರ ಶ್ರೇಷ್ಟತರದ ವಾದದಿಂದ ಸೋಲಿಸಲ್ಪಟ್ಟಂತೆ ಮುಸಲ್ಮಾನರು ಸೋಲುತ್ತಿರಲಿಲ್ಲ ನಿಜ. ಏಕೆಂದರೆ ಅವರ ಧಾರ್ಮಿಕ ಶ್ರದ್ಧೆ ಬುದ್ಧಿ ಮಟ್ಟದ ತರ್ಕದ ತಳಹದಿಯುದೇ ಅಲ್ಲ! ಅವರು ತಾತ್ವಿಕತರದ ವಾದಕ್ಕೆ ಕಿವಿಗೊಡುತ್ತಿರಲಿಲ್ಲ. ಆದರೆ ಶ್ರೀ ಶಂಕರಾಚಾರ್ಯರು ಹಿಂದೂ ಧರ್ಮದ ಅಪಾರ ಸಂಖ್ಯೆಯ ಕಾಪಾಲಿಕರು ವಾಮಾಚಾರಿಗಳು ಮುಂತಾದ ತಾಮಸಿಕ ಧಾರ್ಮಿಕದಾರಿ ಹಿಡಿದವರನ್ನು ಸೌಮ್ಯತರದ ದಾರಿಗೆ ಒಲಿಸಿದ್ದೂ ತಾತ್ವಿಕ ಮಟ್ಟದ ತರ್ಕಗಳಿಂದಿರಲಾರದು. ಅದು ಕೇವಲ ಅಪಾರ ದೈವೀಶಕ್ತಿಯಿಂದ ಮಾತ್ರವೇ ಸಾಧಿಸಲ್ಪಟ್ಟಿರಬೇಕು. ಏಕೆಂದರೆ ದುಷ್ಟರನ್ನು ತಿದ್ದುವುದು ತೀರಾ ತೀರಾ ಕಷ್ಟಸಾಧ್ಯ ಶ್ರೀಕೃಷ್ಣನೇ ಸಂಧಾನಕ್ಕೆ ಬಂದಾಗಲೂ ಕೌರವನು ತನ್ನ ಹಠ ಬಿಡಲಾರದಾದ 18 ಅಕ್ಷೋಹಿಣೀ ಸೈನ್ಯದ ನಾಶಕ್ಕೆ ಕಾರಣನಾದ. ಆದರೆ ಕೋಟ್ಯಾಂತರ ಅವೈದಿಕ ಆಚಾರದ ಹಿಂದುಗಳು ತಮ್ಮ ತಪ್ಪುದಾರಿ ತ್ಯಜಿಸಿ ಎಲ್ಲರೂ ಉತ್ತಮ ಆಚಾರಗಳನ್ನು ಅನುಸರಿಸುವಂತೆ ಮಾಡಿದ ಅತ್ಯದ್ಭುತ ಆಚಾರ್ಯ ಶ್ರೀಶಂಕರರಿಗೆ ಮುಸಲ್ಮಾನರನ್ನು ಮತಾಂತರಿಸುವುದು ಸಾಧ್ಯವಾಗುತ್ತಿದ್ದಿರಬಹುದಲ್ಲವೇ?

ಶ್ರೀ ಶಂಕರಾಚಾರ್ಯರು ಈಗ ಇಲ್ಲವಾದರೂ, ಅವರು ಆರಿಸಿದ ನಮ್ಮ ಧರ್ಮದ ಏಕಮಾತ್ರ ಸತ್ಯವಾದ ಅದ್ವೈತ ತತ್ವವು ಇತರ ಮತದವರನ್ನು ನಮ್ಮ ಧರ್ಮಕ್ಕೆ ಒಲಿಸಲು ಇನ್ನೂ ಇದೆ ಈ ಅದ್ವೈತ ತತ್ವದ ಹಿರಿಮೆಯಿಂದಾಗಿಯೇ ಅದನ್ನೊಪ್ಪುವ ಸೂಫೀ ಪಂಥವೆಂಬುದು ಮುಸಲ್ಮಾನ ಧರ್ಮದಲ್ಲೂ ಉಂಟಾಗಿದೆ ಎಂದರೆ ಅನೇಕರಿಗೆ ಆಶ್ಚರ್ಯವಾಗದಿರದು.

ಅದ್ವೈತ ತತ್ವದ ಅದ್ವಿತೀಯ ಸತ್ಯತೆಯ ಹಿರಿಮೆಯೊಡನೆ, ಅದಕ್ಕೆ ಅನ್ಯಮತೀಯರನ್ನು ಮತಾಂತರಿಸಲು ಸಾಧ್ಯವಾಗಲೆಂದು ಶ್ರೀ ಶಂಕರಾಚಾರ್ಯರು ಅದರ ಅದ್ಭುತ ತರದ ಪ್ರತಿಪಾದನಾಕ್ರಮವನ್ನು ನಿರ್ಮಿಸಿಕೊಟ್ಟರು. ಅನ್ಯಮತೀಯರ ಮತಾಂತರಕ್ಕೆ ನಾವು ದೇವರಿಂದಲೇ ಬಂದಿದ್ದೇವೆ ಎನ್ನುವ ವೇದದ ಆಧಾರ, ಶರಣಾಗತಿಯ ಹಿರಿಮೆಯ ಇತಿಹಾಸ ಪುರಾಣಗಳ ದೃಷ್ಟಾಂತ, ಭಕ್ತಿಯ ಸುಲಭದಾರಿಯ ರಾಧೆಯ ಕೃಷ್ಣಾನುರಾಗ ಕ್ರಮ, ಮುಂತಾದವು ಪ್ರಯೋಜನವಾಗವು; ಏಕೆಂದರೆ ಅವರು ನಮ್ಮ ಶಾಸ್ತ್ರ ನಂಬದವರು. ಬಲತ್ಕಾರ, ಖಡ್ಗ, ಪಿಸ್ತೂಲು, ಹಣದ ಲಂಚ ರಾಜಕೀಯ ದರ್ಪ, ಇವುಗಳ ಮೂಲಕವೂ ಮತಾಂತರ ನಡೆದಿದೆ, ಆದರೆ ಈ ಅಲ್ಪತರದ ದಾರಿಗಳು ಹಿಂದೂ ಧರ್ಮಕ್ಕೆ ಈ ಕಾರ್ಯಕ್ಕೆ ಸಂತೋರಿದವೇ ಅಲ್ಲ. ಹಿಂದೂ ಮಹಾತ್ಮರ ಮಹಿಮೆ ಕಂಡು ಕೆಲವು ಅನ್ಯಮತೀಯರು ಹಿಂದೂ ಧರ್ಮಕ್ಕೆ

ಆಕರ್ಷಿತರಾದದ್ದುಂಟು. ಆದರೆ ಇದು ವೈಯ್ಯಕ್ತಿಕವಾಗಿ ಅತಿಸ್ವಲ್ಪವಾಗಿಮಾತ್ರ ನಡೆದದ್ದು. ಅನ್ಯಮತೀಯರ ಮತಾಂತರಕ್ಕೆ ಇನ್ನುಳಿದ ದಾರಿಯಂದರೆ ನಮ್ಮ ಧರ್ಮದ ಅತ್ಯಂತ ಸಮರ್ಥತೆಯ ಪ್ರತಿಪಾದನೆಮಾತ್ರ ಇದಕ್ಕಾಗಿಯೇ ಶ್ರೀಶಂಕರಾ ಚಾರ್ಯರು ಅದ್ವೈತದ ಅತ್ಯಂತ ಸಮರ್ಥತೆಯ ಪ್ರತಿಪಾದನಾ ಕ್ರಮವನ್ನು ನಿರ್ಮಿಸಿ, ಅದು ಶಾಶ್ವತವಾಗಿ ಅನ್ಯ ಮತೀಯರಿಗೂ ಹಿಂದೂ ಧರ್ಮದ ಹಿರಿಮೆ ತಿಳಿಸಲು ಒದಗುತ್ತಿರಲಿ, ಎಂದು ಮಾಡಿದರು. ಅವರು ತಮ್ಮ ಮಾಂಡೂಕ್ಯ ಕಾರಿಕೆಯ ಮೂರನೆಯ ಆಧ್ಯಾಯದಲ್ಲಿ ಹೇಳಿದ್ದುಂಟು.

ಅದ್ವೈತಂ ಕಿಂ ಆಗಮ ಮಾತ್ರೇಣ ಪ್ರತಿಪತ್ತ್ಯಂ ಆಹೋಸ್ವಿತ್ತರ್ಕೇಣಾಪೀತ್ಯತ ಆಹ ಶಕ್ಯತೇ ತರ್ಕೇಣಾಪಿ ಜ್ಞಾತುಮ್ ತತ್ಕಥಮಿತಿ ಅದ್ವೈತ ಪ್ರಕರಣಂ ಪ್ರಾರಭ್ಯತೇ

ಎಂದರೆ ಅದ್ವೈತವನ್ನು ಕೇವಲ ಶಾಸ್ತ್ರಾಧಾರದಮೇಲೆ ಮಾತ್ರ ಪ್ರತಿಪಾದಿಸಲು ಬರುತ್ತದೆಯೋ ಅಥವಾ ಕೇವಲ ಕಾರಣಯುಕ್ತವಾದ ತರ್ಕದಿಂದ ಅದನ್ನು ರುಜು ಮಾಡಲಿಕ್ಕೂ ಬರುತ್ತದೆಯೋ ಎಂದು ಕೇಳಿದರೆ, ಅದನ್ನು ಕಾರಣಯುಕ್ತ ತರ್ಕದಿಂದಲೂ ರುಜುಮಾಡಲು ಬರುತ್ತದೆಯೆಂದು ತಿಳಿಸಬೇಕಾಗುತ್ತದೆ. ಅದು ಹೇಗೆಂಬುದನ್ನು ಅದ್ವೈತದಮೇಲಿನ ಈ ಅಧ್ಯಾಯದಲ್ಲಿ ನೋಡಬಹುದು ಎಂದಿದ್ದಾರೆ.

ಅದ್ವೈತದ ಪ್ರತಿಪಾದನೆಗೆ ಅದ್ವಿತೀಯ ದೈವಶಕ್ತಿಯಿಂದ ಪ್ರತಿಪಾದಿತವಾದ ಈ ತರದ ಕೇವಲ ತರ್ಕಬದ್ಧದ ದಾರಿಯು ಮುಂದೆ ಎಂದೆಂದಿಗೂ ಅತ್ಯಂತ ಸಮರ್ಥತೆಯಿಂದ ಉಪಯೋಗಿಸಪಡಲಿಕ್ಕೆಂದು ಇದ್ದಿತ್ತಾದ್ದರಿಂದಲೇ, ಆಮೇಲೆ ಮುಸಲ್ಮಾನರನ್ನಲ್ಲದಿದ್ದರೂ, ಅನ್ಯಮತೀಯರಾದ ಅನೇಕ ಕ್ರಿಶ್ಚನ್ ಮೇಧಾವಿಗಳನ್ನು ಅದಕ್ಕೆ ಒಲಿಸಲಿಕ್ಕೆ ಸ್ವಾಮಿ ವಿವೇಕಾನಂದರು ಸಮರ್ಥರಾದರು. ಪಾಶ್ಚಾತ್ಯ ಮೇಧಾವಿಗಳಿಂದ ಕಿಕ್ಕಿರದ ಅನೇಕಾನೇಕ ಸಭೆಗಳಲ್ಲಿ ಅವರು ಅರ್ಥಮಾಡಿಕೊಳ್ಳಲು ಕಷ್ಟವಾದ, ಮತ್ತು ಪಾಶ್ಚಾತ್ಯರಿಗೆ ಸಂಪೂರ್ಣ ಆಶ್ಚರ್ಯಕರವಾಗಿ ತೋರಿದ ಅದ್ವೈತವನ್ನು ಯಾವ ಸಂಕೋಚವೂ ಇಲ್ಲದೆ, ಕಷ್ಟವೂ ಇಲ್ಲದೆ ಎಲ್ಲರೂ ಮೆಚ್ಚಿ ತಲೆ ತೂಗುವ ರೀತಿಯಲ್ಲಿ ಪ್ರತಿಪಾದಿಸುವಂತಾದರು. ಅದು ಈಗ ನಿಧಾನವಾಗಿ ಅನ್ಯಮತೀಯ ಮೇಧಾವಿಗಳಲ್ಲಿ ತನ್ನ ಕೆಲಸಮಾಡುತ್ತಿದೆ. ಬುದ್ಧಿಸೂಕ್ಷ್ಮತೆಯುಮುಟ್ಟದಿಂದ ತಮ್ಮ ಧರ್ಮದ ತತ್ವಗಳಲ್ಲಿ ತುಂಬಾ ದೋಷಕಂಡ ಅವರು, ತಮ್ಮ ಧಾರ್ಮಿಕ ಒಲವನ್ನು ಬೆಳೆಸಬೇಕಾದರೆ ಅದ್ವೈತವೇದಾಂತಕ್ಕಿಂತ ಧೃಢವಾದ ಆಧಾರ ತಮಗೆ ಸಿಕ್ಕದು ಎಂದು ಭಾವಿಸುತ್ತಿದ್ದಾರೆ

ಶ್ರೀ ಶಂಕರಾಚಾರ್ಯರು ತಮ್ಮ ಕಾಲದಲ್ಲಿದ್ದ ಬುದ್ಧರನ್ನು ಗೆಲ್ಲದೆ ಬಿಡುತ್ತಿದ್ದರೆ ಅವರನ್ನು ಆನಂತರ ಬಂದ ಯಾವ ಆಚಾರ್ಯರೂ ಗೆಲ್ಲುತ್ತಿರಲಿಲ್ಲ ಎಂಬುದು ಖಂಡಿತ.

ಆದರೂ ಕೆಲವು ಆಚಾರ್ಯರು ಶ್ರೀಶಂಕರಾಚಾರ್ಯರ ಈ ಸ್ಪಷ್ಟವಾದ ಮಹತ್ಕಾರ್ಯದ ಬಗ್ಗೆ ಗೌರವ ಕೃತಜ್ಞತೆ ತಾಳುವಬಗ್ಗೆ, ಅವರ ಅದ್ವಿತೀಯತೆ ಒಪ್ಪಿಕೊಳ್ಳುವಬಗ್ಗೆ ತಮ್ಮ ಭಕ್ತಿ ಪಂಥದ ಪ್ರತಿಪಾದನೆಗೆ ಅದ್ವೈತವನ್ನು ತುತ್ತುದಿಯ ಶಿಖರ ತರದ ತತ್ವ ವಾಗಿ ಸೇರಿಸಿಕೊಳ್ಳುವಬಗ್ಗೆ, ಅವರ ವಿಚಾರವಾಗಿ ಮಾತ್ಸರ್ಯ ಭಾವದ ತಿರಸ್ಕಾರ ಮಾತ್ರ ತೋರಿದ್ದುಂಟು. ಅವರಿಗಿಂತ ತಾವೇ ಅತ್ಯಂತ ಬುದ್ಧಿವಂತರು ಎಂಬ ಮಟ್ಟ ದಿಂದ ಅವರ ಅದ್ವೈತದ ಪ್ರತಿಪಾದನೆಯನ್ನು ಅತಿಬಿರುಸಾಗಿ ಖಂಡಿಸಿದ್ದುಂಟು. ಇದ ರಿಂದಾಗಿ ಇವರ ಶಿಷ್ಯರು. ಅದ್ವೈತವನ್ನೂ ಶ್ರೀ ಶಂಕರಾಚಾರ್ಯರನ್ನೂ ತುಂಬಾ ತಾತ್ಸಾರದಿಂದ ಕಾಣುತ್ತ ಬರುವಂತಾಯಿತು. ಆದರೆ ಈ ಶಿಷ್ಯರಿಗೆ ತಮ್ಮ ಆಚಾ ರ್ಯರ ಪಂಥದ ತತ್ವವೇ ಅದ್ವಿತೀಯ ಹಿರಿಮೆಯದು ಎಂಬುದನ್ನು ಪಾಶ್ಚಾ ತ್ಯರ ಕ್ಷೇತ್ರದಲ್ಲೂ ಸಾರಿ ಅವರ ನಿಷ್ಪಕ್ಷಪಾತದ ಒಪ್ಪಿಗೆ ಇದಕ್ಕೆ ಪಡೆಯುವ ಸಾಹಸಕ್ಕೆಮಾತ್ರ ಧೈರ್ಯಬಂದದ್ದಿಲ್ಲ! ತಮ್ಮ ಬೆನ್ನನ್ನು ತಾವೇ ಚಪ್ಪರಿಸಿಕೊಳ್ಳುತ್ತ ತಮ್ಮ ಅದ್ವಿತೀಯತೆ ತಾವೇ ಹೊಗಳಿಕೊಳ್ಳುತ್ತ ತಮ್ಮಷ್ಟಕ್ಕೆ ತಾವೇ ಇರುವ ಇವರ ದಾರಿಯು, ಅಪಾರ ಪ್ರಚಾರವಿರುವ ಈ ಕಾಲದಲ್ಲಿ ಚೆನ್ನಾಗಿ ಬಾಳಲಾರದು. ಲೋಕವೇ ಅದ್ವೈತ ವೇದಾಂತವು ಅತ್ಯಂತ ಹಿರಿಮೆಯದು ಎಂಬುದನ್ನು ಒಪ್ಪುವು ದನ್ನು ಇವರೂ ಸಹಿಸಿ ಬಾಳಲು ಕಲಿಯುವುದು ಮೇಲು.

ಇಡೀ ಭಾರತಭೂಮಿಯಲ್ಲಿ ತಮ್ಮ ಅದ್ವಿತೀಯ ಬೋಧನೆಯಿಂದ ನಮ್ಮ ಧರ್ಮ ವನ್ನು ರಕ್ಷಿಸಿ ಪುನಃ ಭದ್ರವಾಗಿ ಸ್ಥಾಪಿಸಿದ ಶ್ರೀ ಶಂಕರಾಚಾರ್ಯರನ್ನು ಆ ಕಾಲದ ಹಿಂದೂ ಸಮಾಜವು ಸರ್ವಾನುಮತದಿಂದ ಜಗದ್ಗುರು ಎಂದು ಒಪ್ಪಿ, ಕೊಂಡಾಡಿ, ಗೌರವಿಸಿ, ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿದ್ದು ತೀರಾ ನ್ಯಾಯವೇ. ಅವರ ಅದ್ವಿತೀಯ ಬೋಧನೆಯ ಕ್ರಮವನ್ನೇ ಮುಂದಿನ ಜನಾಂಗಕ್ಕೂ ಕೊಡುತ್ತ ಬಂದ ಅವರ ಮಠಗಳೂ ಲೋಕದ ರೂಢಿಯಂತೆ ಜಗದ್ಗುರು ಮಠಗಳೆಂದೇ ಕರೆಯಲ್ಪ ಡುತ್ತಿರುವ ಕ್ರಮವೂ ನ್ಯಾಯವೇ. ಆದರೆ ಅವರ ಅನಂತರ ಬಂದ ಕೆಲವು ಹೊಸ ಆಚಾರ್ಯರು ತೀರಾ ಮಿತಕ್ಷೇತ್ರ, ಮಿತಸಾಧನೆ, ಮಾತ್ರ ನಡೆಸಿ ದೇಶದ ಬಹು ಮಟ್ಟಿನ ಜನರಿಂದ ಒಪ್ಪಲ್ಪಟ್ಟವರಲ್ಲವಾದರೂ, ತಾವೂ ಅಥವಾ ಅವರ ಸಂಪ್ರದಾ ಯದಲ್ಲಿ ಅನಂತರ ಬಂದ ಮಠಾಧಿಪತಿಗಳೂ ಜಗದ್ಗುರುಗಳೆಂದು ಕರೆದುಕೊಂಡದ್ದು ಮಾತ್ರ, ಧರ್ಮದ ಸತ್ಯತೆಯ ದಾರಿ ಹಿಡಿದವರಿಗೆ ಹೇಗೆ ಭೂಷಣವಾದೀತು!

ಆಚಾರ್ಯರಲ್ಲೆಲ್ಲ ಶ್ರೀ ಶಂಕರಾಚಾರ್ಯರು ಮಾತ್ರ ಇಡೀ ದೇಶದಲ್ಲಿ ಧರ್ಮದ ಸ್ಥಾಪನೆ ಮಾಡಿದವರೆಂಬುದರಿಂದ ಅವರು ಅದ್ವಿತೀಯ ಆಚಾರ್ಯರು ಎಂದು ಇಷ್ಟರ ವರೆಗೆ ಈ ಅಧ್ಯಾಯದಲ್ಲಿ ಪ್ರತಿಪಾದಿಸಿರುವುದರಿಂದ, ಅವರು ನಿಜಕ್ಕೂ ಇಡೀ ದೇಶದಲ್ಲಿ ತಮ್ಮ ದಿಗ್ವಿಜಯ ನಡೆಸಿದರು ಎಂಬುದಕ್ಕೆ ಈಗಲು ದೇಶದಲ್ಲಿರುವ ಕೆಲವು ದಾಖಲೆಗಳ ವಿಚಾರವನ್ನೂ ತಿಳಿಸುವುದು ಉತ್ತಮವಾದೀತು.

ಅವರು ಪ್ರಥಮವಾಗಿ ನರ್ಮದಾತೀರದಿಂದ ಕಾಶಿಗೆ, ಮತ್ತು ಅಲ್ಲಿಂದ ಬದರಿಗೆ ಹೋದವರು ಬದರಿಯ ಅಲಕನಂದಾ ನದಿಯ ಅತಿ ಆಳವಾದ ನಾರದ ಮಡುವಲ್ಲಿ ಮುಳುಗಿ ಬದರೀ ನಾರಾಯಣ ವಿಗ್ರಹವನ್ನು ತಾವೇ ಉದ್ಧರಿಸಿ, ದೇವಸ್ಥಾನದಲ್ಲಿ ಸ್ಥಾಪಿಸಿದರು ಎಂಬುದಕ್ಕೆ ಈ ಗ ಲೂ ಆ ದೇವಸ್ಥಾನದಲ್ಲಿ ಅತಿದೂರದ ಕೇರಳದ ನಂಬೂದರೀ ಬ್ರಾಹ್ಮಣರೇ ಅರ್ಚಕರಾಗಿರುವ ಸಾಕ್ಷಿಯಿದೆ. ಆಮೇಲೆ ಅ ವ ರು ದೇಶದಲ್ಲೆಲ್ಲ ಅಧರ್ಮವನ್ನು ಸೋಲಿಸುತ್ತ ಪುನಃ ದಕ್ಷಿಣಕ್ಕೆ ಹೋದರೆಂಬುದಕ್ಕೆ ಅವರು ತಾಯಿಗೆ ಮಾತುಕೊಟ್ಟಂತೆ ಅವಳ ಅಂತಿಮಕಾಲಕ್ಕೆ ಕಾಲಟಿಸೇರಿ ಅವಳ ಉತ್ತರ ಕ್ರಿಯೆ ನಡೆಸಿ, ಅದಕ್ಕೆ ತನಗೆ ತನ್ನವರು ಯಾರೂ ಸಹಾಯಕ್ಕೆ ಬಾರದ ತಪ್ಪಿಗಾಗಿ ಅವರಮೇಲೆ ಆಗ ಹಾಕಿದ ಕಟ್ಟುಗಳು ಅವರ ವರ್ಗದವರೆಲ್ಲರಿಂದಲೂ ಇತ್ತೀಚಿನ ವರೆಗೆ ತಪ್ಪದೆ ಆಚರಿಸಲ್ಪಡುತ್ತಿದ್ದ ಅದ್ಭುತ ದೃಷ್ಟಾಂತವಿದೆ. ಶ್ರೀ ಶಂಕರಾಚಾರ್ಯರ ಹುರಿ ಶಾಪದಂತೆ ಶೃಂಗೇರಿಯ ಶ್ರೀ ಸಚ್ಚಿದಾನಂದಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರು ಈ ಸಮಾಜವನ್ನು ಈ ಕಟ್ಟುಗಳಿಂದ ಪರಿಹಾರಮಾಡಿದರು.

ಆ ಮೇಲೆ ಶ್ರೀ ಶಂಕರಾಚಾರ್ಯರು ಧರ್ಮದ ಸ್ಥಿರವಾದ ಸ್ಥಾಪನೆಗಾಗಿ ಪುನಃ ಉತ್ತರಕ್ಕೆ ಹೊರಟವರು ಇಡೀ ದೇಶದಲ್ಲಿ ಅನೇಕಾನೇಕ ದೇವಸ್ಥಾನಗಳ ಪುನಃ ಉದ್ಧಾರಮಾಡಿದರೆಂಬುದಕ್ಕೆ ಆ ದೇವಸ್ಥಾನಗಳ ಚರಿತ್ರೆಯ ದಾಖಲೆಗಳಿವೆ. ದೃಷ್ಟಾಂತಕ್ಕೆ ಅವರು ಕಂಚಿ ಕಾಮಾಕ್ಷಿಯ ಉಗ್ರಕಲೆ ಇಳಿಸಿ ಆ ಮೇಲೆ ತುಂಬಾ ಪ್ರಖ್ಯಾತವಾದ ಸೌಮ್ಯಮೂರ್ತಿ ಮಾಡಿದರು. ಶ್ರೀಶೈಲದಲ್ಲಿ ಕಪಾಲಿಕರ ಹಾವಳಿ ತಪ್ಪಿಸಿ ಕೆಲಕಾಲ ಅಲ್ಲಿದ್ದುದರ ಸಾಕ್ಷಿಯಾಗಿ ಅವರು ಅಲ್ಲಿ ನಿರ್ಮಿಸಿದ ಶಿವಾನಂದಲಹರಿ ಸಾಕ್ಷಿ ದಕ್ಷಿಣ ಕನ್ನಡದ ಪ್ರಸಿದ್ಧ ಶ್ರೀ ಕೊಲ್ಲೂರು ಮೂಕಾಂಬಿಕಾ ದೇವಸ್ಥಾನದಲ್ಲಿ ಅವರು ಸ್ವಯಂಭು ಲಿಂಗದೊಡನೆ ದೇವಿಯ ಮೂರ್ತಿ ಸೇರಿಸಿದರು. ಅ ವ ರು ಧ್ಯಾನಕ್ಕೆ ಕುಳಿತಿರುತ್ತಿದ್ದ ಪೀಠ, ಈಗಲೂ ದರ್ಶನಕ್ಕೆ, ಪೂಜೆಗೆ, ಉಳಿದಿದೆ. ದೇವಸ್ಥಾನದ ಪೂಜಾ ಕ್ರಮ ಈಗಲೂ ಅವರು ಸ್ಥಾಪಿಸಿದಂತೆಯೇ ಮುಂದರಿದಿದೆ. ತಿರುಪತಿಯಲ್ಲಿ ಅವರು ವೆಂಕಟೇಶ್ವರ ಸನ್ನಿಧಿಯಲ್ಲಿ ಸ್ವರ್ಣಾಕರ್ಷಣ ಭೈರವ ಯ ಂ ತ್ರ ವ ನ್ನು ಸ್ಥಾಪಿಸಿದರು. ದೇಶದ ಪ್ರ ತಿ ಕ ಡೆ ಗ ಳ ಲ್ಲೂ ಇಂಥ ಅ ನೇ ಕಾ ನೇ ಕ ದೃಷ್ಟಾಂತಗಳಿವೆ. ಮ ತ್ತು ಅವರಿಗೆ ಅಷ್ಟರಲ್ಲಿ ಇಡೀ ದೇಶದ ಯಾವ ಭಾಗ ದಲ್ಲೂ ಬೇಕಾದಷ್ಟು ಬೆಂಬಲ ಸಿಕ್ಕುವ ಶಿಷ್ಯವರ್ಗ ಸ್ಥಾಪಿತವಾಗಿತ್ತು ಎಂಬುದಕ್ಕೆ ಅವರು ದೇಶದ ಅತ್ಯಂತ ದೂರ ದೂರ ಭಾಗಗಳಲ್ಲಿ ಸ್ಥಾ ಪಿ ಸಿ ದ ಉತ್ತರದಿಕ್ಕಿಗೆ ಹಿಮಾಲಯದ ಜ್ಯೋತಿರ್ಮಠವೂ, ಪೂ ರ್ವ ದ ಪುರೀಜಗನ್ನಾಥದ ಗೋವರ್ಧನ ಪೀಠವೂ, ಪಶ್ಚಿಮದ ಸೌರಾಷ್ಟ್ರದ ಶ್ರೀದ್ವಾರಕಾ ಪೀಠವೂ, ದಕ್ಷಿಣದಿಕ್ಕಿಗೆ ಶ್ರೀ ಶೃಂಗೇರೀ ಶಾರದಾ ಪೀಠವೂ ಧಾರಾಳವಾದ ದಾಖಲೆಗಳಾಗಿವೆ. ಅವರು ಕಾಶ್ಮೀರಕ್ಕೆ ಹೋಗಿ ಶ್ರೀ ಶಾರದಾಪೀಠ ಏರಿದ್ದಕ್ಕೆ ದಾಖಲೆಯಾಗಿ ಅಲ್ಲಿ ಶಂಕರ ಪರ್ವತ,

ಆದರಮೇಲೆ ಅವರ ದೇವಸ್ಥಾನ ಇದೆ. ನೇಪಾಳದ ಪಶುಪತೀಶ್ವರ ದೇವಸ್ಥಾನಕ್ಕೆ ಹೋದ ದಾಖಲೆಯಾಗಿ ಅಲ್ಲಿ ಈಗಲೂ ಕನ್ನಡಿಗ ದಕ್ಷಿಣದವರ ಪೂಜೆಯಿಡುವ ದಾಖಲೆಯಿದೆ ಇಷ್ಟೆಲ್ಲ ಪ್ರಚಾರ್ಯಕಾರ್ಯ ಮಾಡಿದವರು ಕೇದಾರದಲ್ಲಿ ಸಶರೀರವಾಗಿ ಕೈಲಾಸಕ್ಕೆ ದೇವತೆಗಳ ಪ್ರಾರ್ಥನೆಯಂತೆ ಹೋದದ್ದು ಅಲ್ಲಿ ಅವರ ಮೂರ್ತಿಪ್ರತಿಷ್ಠಾ ಕುರುಹೂ, ಈಗ ಒಂದು ಶ್ರೀಶಂಕರಾಚಾರ್ಯ ದೇವಾಲಯವೂ ಇದೆ ಕೆಲವು ಇತರ ಆಚಾರ್ಯರೂ ಬದರಿಗೂ ಕಾಶ್ಮೀರದ ಶ್ರೀ ಶಾರದಾಪೀಠ ಏರಲಿಕ್ಕೆ ಹೋಗಿದ್ದ ರೆಂದು ಅವರ ಶಿಷ್ಯರು ಹೇಳುತ್ತಾರಾದರೂ, ಅವರಪರವಾದ ನಿಜವಾದ ಇಂಥ ದಾಖಲೆಗಳೂ ಇರುವದಿಲ್ಲ.

ಹೀಗೆ ಶ್ರೀಶಂಕರಾಚಾರ್ಯರು ಇಡೀ ದೇಶದಲ್ಲಿ ಧರ್ಮದ ಉದ್ಧಾರ ನಡೆಸಿದ, ಧರ್ಮದ ಎಲ್ಲತರದ ತೊಡಕುಗಳನ್ನೂ ಗೆದ್ದ, ಇಡೀ ಭೂಲೋಕದ ಮೇಧಾವಿಗಳ ಮಾನ್ಯತೆ ಪಡೆಯುತ್ತಿರುವ ಅದ್ವೈತ ತತ್ವದ ಪ್ರತಿಪಾದನೆ ನಮಗೆ ಕೊಟ್ಟ, ಅದ್ವಿತೀಯ ಮಟ್ಟದ ಆಚಾರ್ಯರೆಂಬುದು ನಿರ್ವಿವಾದ, ಗುಣಕ್ಕೆ ಮಾತ್ಸರ್ಯವು ಯಾವ ಜನಾಂಗವನ್ನೂ ಮುಂದೆಬರಲು ಬಿಡಲಾರದು. ಆ ಅಲ್ಪವರ್ತನೆ ಇನ್ನಾದರೂ ಮಾಯಕವಾಗಿ ದೇಶಕಂಡ ಏಕಮಾತ್ರ ಜಗದ್ಗುರುವನ್ನು ಎಲ್ಲರೂ ಏಕ ಕಂಠರಾಗಿ ಹೊಗಳುವ ಕಾಲ ಬರುವಂತಾಗಲಿ !.

—

## ೪. ಶ್ರೀ ಶಂಕರಾಚಾರ್ಯರ ಅನುಚರಣೆಗಳ ಅದ್ವಿತೀಯತೆ.

ಎಲ್ಲ ಆಚಾರ್ಯರೂ ಇತರರಿಗೆ ಬೋಧಿಸುವವರಿದ್ದು, ಅವರ ಪ್ರತಿಯೊಂದು ವರ್ತನೆಯೂ ಶಾಸ್ತ್ರಸಮ್ಮತವಾದ ರೀತಿಯಲ್ಲಿದ್ದು ದೋಷರಹಿತವಾಗಿ ನಡೆದಿರಬೇಕಿತ್ತು ಎಂಬುದು ನಮ್ಮ ನಿರೀಕ್ಷೆ. ಆದರೆ ಮಾಯೆಯ ಕವಚವಾದ ದೇಹದ ಸಂಪರ್ಕದಿಂದ ಅತಿ ಮೇಲ್ಮಟ್ಟದ ಆಚಾರ್ಯರೂ ತಮ್ಮ ವರ್ತನೆಯಲ್ಲಿ ಕೆಲವುವೇಳೆ ಕುಂದು ಕೊರತೆಗಳನ್ನು ತೋರಿಸಿದ್ದುಂಟು; ಅಹಂಕಾರ ಪ್ರದರ್ಶಿಸಿದ್ದುಂಟು; ಶಾಸ್ತ್ರ ಒಪ್ಪದ ಆದರೆ ಹೆಚ್ಚು ಅನುಕೂಲವಾದ ದಾರಿ ಹಿಡಿದದ್ದುಂಟು ಕೇವಲ ಜ್ಞಾನಮೂರ್ತಿಯಾದ ಶ್ರೀ ಶಂಕರಾಚಾರ್ಯರು ಮಾತ್ರವೇ ತಮ್ಮ ಪ್ರತಿಯೊಂದು ಕಾರ್ಯದಲ್ಲೂ ದೇಹದ ಬಂಧನದ ಅಲ್ಪತೆ ತೋರಿಸಿದವರಲ್ಲ; ಅಹಂಕಾರ ಮಮಕಾರಗಳ ಸೆಳತಕ್ಕೆ ಸ್ವಲ್ಪವೂ ಕಟ್ಟುಬಿದ್ದವರಲ್ಲ

ಅವರು ಇನ್ನೂ ಚಿಕ್ಕಬಾಲಕರಾಗಿದ್ದಾಗಲೇ ದೂರವಿದ್ದ ಪೂರ್ಣಾನದಿಗೆ ದಿನಾಲೂ ಮೀಯಲಿಕ್ಕೆಂದು ಹೋಗಿಬರುವುದು ಅವರ ತಾಯಿಗೆ ತುಂಬಾ ಪ್ರಯಾಸಕರವಾಗುತ್ತಿದ್ದುದು ಕಂಡು ನದಿಯೇ ಮನೆಯ ಹತ್ತಿರ ಪ್ರವಹಿಸುವಂತೆ ಮಾಡಿದ್ದರು. ನದಿಯು ಆಗ ಬಿಟ್ಟ ಹಳೆಯ ದಾರಿಯ ಕುರುಹು ಇನ್ನೂ ಚೆನ್ನಾಗಿ ತಿಳಿಯುವಂತೆ ಉಳಿದಿದೆ! ಈ ಅದ್ಭುತ ಪವಾಡಗಳನ್ನು ಮಾಡಿದ ಬಾಲಕನನ್ನು ಸನ್ಮಾನಿಸಲು ಕೇರಳದ ರಾಜನು ಅವರನ್ನು ಆಸ್ಥಾನಕ್ಕೆ ಆವಾಹಿಸಿದನು. ಆದರೆ ಬ್ರಾಹ್ಮಣ ವಟುವಿಗೆ ರಾಜರ ಸನ್ಮಾನ ಹಾನಿಕರ ಮತ್ತು ಅನಗತ್ಯಎಂದು ಬಲ್ಲ ಶ್ರೀಶಂಕರರು ರಾಜನ ದರ್ಶನಕ್ಕೆ ಹೋಗಲು ಬಯಸಲಿಲ್ಲ. ರಾಜನೇ ಅವರನ್ನು ಕಾಣಲು ಆಮೇಲೆ ಕಾಲಟಿಗೆ ಬಂದನಂತೆ.

ಅತಿಚಿಕ್ಕ ವಯಸ್ಸಿನಲ್ಲೇ ಉಪನಿಷತ್ತುಗಳ ಸಾರನನ್ನು ಗ್ರಹಿಸಿದ ಶ್ರೀಶಂಕರರು ತಮ್ಮ ಜನ್ಮ ಸಾರ್ಥಕತೆಗೆ ಸಂನ್ಯಾಸ ಅತ್ಯಗತ್ಯಎಂದು ನಿರ್ಧರಿಸಿದರು. ಆದರೆ ಶಾಸ್ತ್ರವು ತಾಯಿಯೇ ದೇವರು ಎಂದಿರುವುದರಿಂದ, ಮತ್ತು ಅವಳು ತನ್ನ ಸಂನಾಸಕ್ಕೆ ಒಪ್ಪದ್ದರಿಂದ ಮಾತೃಭಕ್ತಿಗೇ ಹೆಚ್ಚು ಸ್ಥಾನ ಕೊಟ್ಟು, ದೈವೀ ಸಂಘಟಣೆಯಿಂದ ಅವಳು ತಮ್ಮ ಸಂನ್ಯಾಸಕ್ಕೆ ಅನುಮತಿಕೊಡುವ ವರೆಗೂ ಅವರು ಸಂನ್ಯಾಸ ಸ್ವೀಕರಿಸಲಿಲ್ಲ. ಸಂನ್ಯಾಸ ಸ್ವೀಕರಿಸಲು ಪತ್ನಿಯ ಅನುಮತಿ ಅಗತ್ಯವಿದೆಯಾದರೂ ಶ್ರೀರಾಮಾನುಜಾಚಾರ್ಯರು ಪತ್ನಿಯ ಅನುಮತಿಯಿಲ್ಲದೆಯೇ ಸಂನ್ಯಾಸಿಯಾಗಿದ್ದರು.

ಆಚಾರ್ಯ ದೇವೋಭವ, ಗುರುವಿಗಿಂತ ಅಧಿಕ ದೇವರಿಲ್ಲ, ಎನ್ನುತ್ತದೆ ನಮ್ಮ ಶಾಸ್ತ್ರ- ಶ್ರೀ ಶಂಕರರು ಕೇರಳದಲ್ಲಿ ವೇದಾಭ್ಯಾಸ ಮಾಡುತ್ತಿದ್ದಾಗಲೂ ಶ್ರೀ ಗೋವಿಂದ ಭಗವತ್ಪಾದರ ಶಿಷ್ಯವೃತ್ತಿ ಮಾಡುತ್ತಿದ್ದಾಗಲೂ ಆದರ್ಶ ಶಿಷ್ಯರಾಗಿದ್ದರು. ಆದ್ದರಿಂದ ಅವರ ಪೂರ್ಣ ಆಶೀರ್ವಾದ ಪಡೆದವರಾಗಿದ್ದರು. ಆದರೆ ಅನಂತರ ಬಂದ ಆಚಾರ್ಯರೆಲ್ಲ ತಮ್ಮದೇ ಆದ ಪಂಥ ಕಟ್ಟಿದವರಿದ್ದು ಅವರವರ ಗುರುವಿನ ಬೋಧನೆ ಧಿಕ್ಕರಿಸಿದವರು ಕೆಲವರಂತೂ ಕಲಿಯುತ್ತಿರುವಾಗಲೇ ಪುನಃ ಪುನಃ ತಮ್ಮದೇವಾದ ಹೂಡಿ ಅವರ ಮನಸ್ಸನ್ನು ತುಂಬಾ ನೋಯಿಸುತ್ತಿದ್ದವರು.

ಶ್ರೀ ರಾಮಾನುಜಾಚಾರ್ಯರ ಮತ್ತು ಶ್ರೀ ಮಧ್ವಾಚಾರ್ಯರ ಕಾಲಕ್ಕೆ ಹಿಂದೆ ದೇಶದಲ್ಲಿ ಎಲ್ಲೆಲ್ಲೂ ಅತ್ಯಧಿಕ ಮಟ್ಟದಲ್ಲಿ ಅಭ್ಯಾಸದಲ್ಲಿದ್ದುದು ಅದ್ವೈತ ವೇದಾಂತ ಮಾತ್ರ. ದ್ವೈತ ವಿಶಿಷ್ಟಾದ್ವೈತ ಮತಗಳ ಪ್ರತಿಪಾದನೆ ಇದ್ದಿತಾದರೂ ಅದು ತೀರಾ ಅಲ್ಪಸ್ವಲ್ಪ ಮಟ್ಟದಲ್ಲಿ ಮಾತ್ರ. ವೇದಾಂತವೆಂದರೇ ಅದ್ವೈತ ಎಂಬುದೇ ಸರ್ವಸಾಮಾನ್ಯ ಭಾವನೆಯಾಗಿದ್ದುದರಿಂದ, ವೇದಾಂತ ಒಪ್ಪದ ಅನ್ಯ ಪಂಥದವರು ಅದನ್ನು ಖಂಡಿಸಿದಾಗಲೆಲ್ಲ, ಅದನ್ನು ಅದ್ವೈತವೆಂದು ಮಾತ್ರವೇ ಎಣಿಸಿ ಖಂಡಿಸಿದ್ದು ಕಾಣುತ್ತದೆ. ಶ್ರೀ ಶಂಕರರ ಗುರು ಅದ್ವೈತಿಗಳು, ಗುರುವೇ ದೇವರು ಎಂದು ಭಾವಿಸಿದ ಶಿಷ್ಯ ಅವರು ಬೋಧಿಸಿದ್ದನ್ನೇ ನಿಜತ್ವವೆಂದು ಗ್ರಹಿಸಿದವರು.

ಶ್ರೀ ಮಧ್ವಾಚಾರ್ಯರಿಗೆ ಸಂನ್ಯಾಸ ಕೊಟ್ಟ ಗುರುವೂ ಹೀಗೆಯೇ, ಆ ಕಾಲದ ಸಾಂಪ್ರದಾಯ ಕ್ರಮದಂತೆ ಅದ್ವೈತಿಗಳೇ ಆಗಿದ್ದರು. ಆದರೆ ಶ್ರೀ ಮಧ್ವರಿಗೆ ದ್ವೈತದ ಒಲವೇ ಪ್ರಬಲ ವಾಗುತ್ತಬಂದು, ಗುರು ಭಕ್ತಿಗಿಂತ ತಮ್ಮ ಬುದ್ಧಿ ಚುರುಕುತನಕ್ಕೇ ಅಧಿಕ ಸ್ಥಾನ ಕೊಡುತ್ತಿದ್ದ ಅವರಿಂದ ಗುರುವಿನ ಪ್ರತಿಪಾದನೆಯ ಖಂಡನೆ ಆಗಾಗ ಧಾರಾಳವಾಗಿ ನಡೆದಿತ್ತು. ಇದು ಗುರುವಿನ ಮನಸ್ಸಲ್ಲಿ ತುಂಬಾ ತಾಪ ಉಂಟುಮಾಡಿರಬೇಕು. ಶ್ರೀ ರಾಮಾನುಜರೂ ತಮಗೆ ವೇದ ಪಾಠ ಹೇಳುತ್ತಿದ್ದ ಯಾದವಪ್ರಕ್ಷರೊಡನೆ ಆಗಾಗ ಇಂಥ ವಾದ ನಡೆಸಿ, ಅವರೊಳಗೆ ವಿಪರೀತ ವಾದ ವೈಮನಸ್ಸುಂಟಾಗಿ, ತಮ್ಮ ಆಚಾರ್ಯರು ತಮ್ಮನ್ನು ಕೊಲ್ಲಿಸಲಿಕ್ಕಿದ್ದಾರೆಂದು ಭಾವಿಸಿ, ಅವರನ್ನು ತ್ಯಜಿಸಿದರು ಈ ಇಬ್ಬರು ಆಚಾರ್ಯರೂ ಶಿಷ್ಯರಲ್ಲಿ ಗುರು ಭಕ್ತಿ ಅತ್ಯಗತ್ಯ ಎಂದವರೇ ಆದರೆ ಶ್ರುತಿಯೇ ವಿಧಿಸಿದ ಆಚಾರ್ಯದೇವೋಭವ ಎಂಬ ವಾಕ್ಯ ಪಾಲಿಸಿದವರಲ್ಲ. ಆದ್ದರಿಂದ ಅವರ ಈ ತರದ ಶ್ರುತಿ ವಿರುದ್ಧ ವರ್ತನೆ ಅವರ ಆಧ್ಯಾತ್ಮಿಕ ಜೀವನಕ್ಕೆ ಅತ್ಯುತ್ತಮ ಪೀಠಿಕೆಯಲ್ಲ

ಇದಕ್ಕೆ ಈಕಾಲದವರು ಒಂದು ಆಕ್ಷೇಪ ಎತ್ತಬಹುದು. ಆಚಾರ್ಯರ ಪ್ರತಿಪಾದನೆ ತಪ್ಪಾಗಿರುವಾಗ ಶಿಷ್ಯ ಹೇಗೆ ಅದನ್ನು ಒಪ್ಪಬೇಕು? ಅವನು ಮೂಢನೂ ಬೊಡ್ಡನೂ ಆದರೆ ಮಾತ್ರ ಅದು ನ್ಯಾಯವಾದೀತು ಎಂದು ಆದರೆ ಧಾರ್ಮಿಕ ಬೋಧನೆಗೆ ಈ ಆಕ್ಷೇಪ ಅನ್ವೈಸಲಾರದು. ಶಿಷ್ಯನು ವಾದಿಸುವುದು ಕೇವಲ ತನ್ನ ಬುದ್ಧಿ ಸೂಕ್ಷ್ಮತೆಯಿಂದ. ಆದರೆ ಪ್ರತ್ಯಕ್ಷವಲ್ಲದಿರುವ ಆಧ್ಯಾತ್ಮಿಕ ವಿಚಾರಗಳಲ್ಲಿ ಕೇವಲ ಬುದ್ಧಿಯಮಟ್ಟದ ತೀರ್ಮಾನ ಸರಿಯಲ್ಲ. ಒಬ್ಬ ಹೇಳಿದ್ದನ್ನು ಅವನಿಗಿಂತ ಹೆಚ್ಚು ಬುದ್ಧಿ ಚುರುಕುತನ ಇದ್ದ ಇನ್ನೊಬ್ಬ ವಾದಿಸಿ ಖಂಡಿಸಬಹುದು. ಬುದ್ಧಿ ಎಟುಕಲಾರದ ಆತ್ಮದ ವಿಚಾರದಲ್ಲಿ ಅನುಭವದ ತಳಹದಿಮಾತ್ರವೇ ಭದ್ರವಾದುದು. ತನಗೆ ಪಾಠಹೇಳುವ ಗುರುವು ಸಾಮಾನ್ಯತರದ ಬುದ್ಧಿ ಚುರುಕುತನದವನಿದ್ದು ಶಿಷ್ಯನ ಆಕ್ಷೇಪಗಳಿಗೆ ಉತ್ತರಕೊಡಲು ಅಸಮರ್ಥನಾಗಬಹುದು ಆದರೆ ಅವನು ಬೋಧಿಸುವ ಸಾಂಪ್ರದಾಯಿಕ ವಿವರಣೆಗಳ ಹಿನ್ನೆಲೆಯಾಗಿ ಹಿಂದಿನ ಸಾವಿರಾರು ಗುರುಗಳ ಅವರಲ್ಲಿ ಕೆಲವರು ಅತ್ಯಂತ ಮೇಧಾವಿಗಳಾದವರ ಬೆಂಬಲವಿದೆ ಅವರಲ್ಲಿ ಕೆಲವರು ಮಹಾಪುರುಷ ಸಾಧಕರ ಅನುಭವದ ಅನುಮೋದನೆಯೂ ಇದೆ. ಆದರೆ ದುರು ಅನುಭವದಮಟ್ಟಕ್ಕೆ ಇನ್ನೂ ಏರದಿರುವ ಶಿಷ್ಯನ ಆತ್ಮವಿಚಾರದ ವಾದ ಕೇವಲ ಹಠಮಾರಿತನವಾಗುತ್ತದೆ. ಅದ್ದರಿಂದ ಧಾರ್ಮಿಕವಿಚಾರಗಳಲ್ಲಿ ಸಂಪ್ರದಾಯ ಬಿಡಕೂಡದು; ಅದುಮಾತ್ರವೇ ಭದ್ರವಾದ ದಾರಿ; ಎಂದು ಶಾಸ್ತ್ರವು ಸಿದ್ಧರಿಸಿದೆ.

ಆದ್ದರಿಂದಲೇ ಶ್ರುತಿಯು ಆಚಾರ್ಯದೇವೋ ಭವ ಎಂದಾಗ ಅದಕ್ಕೆ ಆಕ್ಷೇಪಗಳನ್ನೇನೂ ಸೂಚಿಸಲಿಲ್ಲ. ಏಕೆಂದರೆ ಅತಿಹೆಚ್ಚು ಬುದ್ಧಿ ಚುರುಕುತನವಿರುವ

ಶಿಷ್ಯನಿಗೂ ಈದಾರಿ ಮಾತ್ರವೇ ಭದ್ರವಾದುದು ಈತರದ ಇನ್ನೊಂದು ಆದೇಶ ವಾದ ಪಿತೃದೇವೋಭವ ಎಂಬಲ್ಲೂ ಶರ್ತಗಳಿಲ್ಲದ್ದರಿಂದ ಶ್ರೀರಾಮಚಂದ್ರನು ಕಾಡಿಗೆ ಹೋಗಬೇಕೆಂಬ ದಶರಥನ ಆಜ್ಞೆಗೆ ಅವನಿಗೆ ಪತ್ನಿಯಲ್ಲಿದ್ದ ವ್ಯಾಮೋಹವೇ ಕಾರಣ ವಾಗಿದ್ದರೂ ಮರುಮಾತಿಲ್ಲದೆ ಅದನ್ನು ಪಾಲಿಸಿದನು. ಅಂತೆಯೇ ಭೀಷ್ಮನೂ ಆ ಆದರ್ಶದಾರಿ ಹಿಡಿದನು; ವಾದದದಾರಿಯನ್ನಲ್ಲ.

ಸತ್ಯಕ್ಕೆ ಅತ್ಯಂತ ನೇರವಾದ ದಾರಿ ಹಲವು ಇರಲಾರವು. ಅನೇಕಾನೇಕ ಅನುಭವಿಗಳಿಂದ ಅನುಮೋದಿಸಲ್ಪಟ್ಟ ಸಾಂಪ್ರದಾಯಿಕ ದಾರಿಯನ್ನು, ತನ್ನ ಪಾಠಗ ಳಲ್ಲಿ ಇನ್ನೂ ಅಪೂರ್ಣನಾದ ವಿದ್ಯಾರ್ಥಿ ಧಿಕ್ಕರಿಸುವುದೆಂದಾದರೆ, ಅಥವಾ ಅವನು ಆಮೇಲಾದರೂ ಧಿಕ್ಕರಿಸಿ ತನ್ನದೇ ಆದ ಪಂಥ ಕಟ್ಟುವುದಾದರೆ, ಅವನ ಶಿಷ್ಯ ಮತ್ತೊಂದು ಪಂಥ, ಶಿಷ್ಯನ ಶಿಷ್ಯ ಮರುದೊಂದು ಪಂಥ ಕಟ್ಟುವ ತನ್ಮೂಲಕ ಧರ್ಮದಲ್ಲಿ ತೀರಾ ಭಿನ್ನತೆ ಸಂಶಯ ಅಪಕ್ವತೆ ಉಂಟಾಗುವ ಸ್ಥಿತಿ ಬಾರದಿರದು. ದೃಷ್ಟಾಂತಕ್ಕೆ ತಮ್ಮ ಆಚಾರ್ಯರನ್ನು ಧಿಕ್ಕರಿಸಿದ ಶ್ರೀ ರಾಮಾನುಜಾಚಾರ್ಯರ ಪಂಥದ ಶ್ರೀ ರಮಾನಂದರು ಶ್ರೋತ್ರೀಯರಾಗಿದ್ದರೂ, ಧರ್ಮಶಾಸ್ತ್ರದ ಕೆಲವುಭಾಗ ಧಿಕ್ಕರಿಸಿ, ತಮ್ಮದೇ ಆದ ಪಂಥಕಟ್ಟಿದರು. ಅವರ ಶಿಷ್ಯರು ಕ್ಷೌರಿಕಸೇನರು, ಸಮು ಗಾರ ರೈದಾಸರು, ಶ್ರೋತ್ರೀಯರು ಕೂಡ ಅಲ್ಲ, ಅವರು ತಮ್ಮ ಗುರುವಿನ ಪಂಥಕ್ಕಿಂತ ಬೇರೆಆದ ಪಂಥಗಳನ್ನೇ ಕಟ್ಟಿದರು. ಆದ್ದರಿಂದ ಇತರ ಆಚಾರ್ಯರು ಹಿಡಿದ ದಾರಿಗಿಂತ ಶ್ರೀ ಶಂಕರಾಚಾರ್ಯರು ಹಿಡಿದ ಸಾಂಪ್ರದಾಯಿಕ ದಾರಿ ಮಾತ್ರವೇ ಅದ್ವಿತೀಯ ಹಿರಿಮೆಯ, ಅತ್ಯಂತ ಭದ್ರತೆಯ, ದಾರಿಯಾಗುತ್ತದೆ.

ತಮ್ಮ ಹೊಸತರದ ಪ್ರತಿಪಾದನೆಯೇ ಅತ್ಯಂತ ಶ್ರೇಷ್ಠ ಎನ್ನುವವರಲ್ಲಿ ಒಂದು ತರದ ಅಹಂಭಾವ ಇದ್ದೇ ಇದೆ. ಆದರೆ ಶ್ರೀ ಶಂಕರಾಚಾರ್ಯರು, ತಾವು ಕೇವಲ ಸಾಂಪ್ರದಾಯಿಕ ಕ್ರಮದವರು ಎಂದು ತಾವೇ ಹೇಳಿಕೊಂಡ ಅಪಾರ ನಮ್ರತೆ ಯುಳ್ಳವರು. ಸನಾತನ ಧರ್ಮವು ಪರಿಪೂರ್ಣವಾದ ಧರ್ಮವಾದ್ದರಿಂದ ಅದಕ್ಕೆ ತಾನು ಸೇರಿಸಬೇಕಾದ, ಬದಲಾಯಿಸಬೇಕಾದ, ಅಂಶ ಏನೂ ಇಲ್ಲ; ಕೇವಲ ಅದರ ವಿಶದೀಕರಣಮಾತ್ರ ಬೇಕಾಗದೆ, ಎಂದು ಸ್ವತಂತ್ರ ಗ್ರಂಥಗಳ ನಿರ್ಮಾಣಕ್ಕೆ ಕೈ ಹಾಕದೆ, ಕೇವಲ ಆಧಾರ ಗ್ರಂಥಗಳ ಭಾಷ್ಯ ಬರೆಯುವುದನ್ನೇ ತಮ್ಮ ಮುಖ್ಯ ಕಾರ್ಯವಾಗಿ ಮಾಡಿಕೊಂಡರು. ರವಷ್ಟೂ ಅಹಂಭಾವವಿರದಿದ್ದ ಆ ಅದ್ವಿತೀಯ ಆಚಾರ್ಯರು ತಮ್ಮ ಅತಿ ಪ್ರಖ್ಯಾತವಾದ ಪ್ರಸ್ಥಾನತ್ರಯ ಭಾಷ್ಯಗಳನ್ನು ಬರೆದದ್ದೂ, ಅವರ ಗುರುವಿನ ಆಜ್ಞೆಯಂತೆ ಮಾತ್ರ; ಗುರುದಕ್ಷಿಣೆಯಾಗಿ ಮಾತ್ರ ತಮ್ಮ ಕೀರ್ತಿ ಬೆಳೆಸಬೇಕೆಂದಲ್ಲ. ಅವರ ಈ ಭಾಷ್ಯಗಳ ಪ್ರತಿಪಾದನಾ ಸಾಮರ್ಥ್ಯವನ್ನು ಈಗ ಇಡೀ ಭೂಲೋಕದ ಅತ್ಯಂತ ಮೇಧಾವೀ ತತ್ವಜ್ಞಾನಿಗಳೂ ಅತ್ಯಂತ ಬೆರಗಿಂದ ಕಾಣುತ್ತಿದ್ದಾರೆ; ಹೊರತು ತಮ್ಮ ಗುರುಗಳನ್ನು ಸೋಲಿಸಿದವರ ವ್ಯಾಖ್ಯಾನಗಳನ್ನಲ್ಲ.

ಶ್ರೀ ಶಂಕರಾಚಾರ್ಯರು ಬ್ರಹ್ಮಸೂತ್ರದ ಭಾಷ್ಯ ಬರೆದು ಮುಗಿಸಿದಾಗ, ಭಗವಾನ್ ವ್ಯಾಸರೇ ವೃದ್ಧಬ್ರಾಹ್ಮಣ ವೇಷದಲ್ಲಿ ಬಂದು ಅವರೊಡನೆ ಆ ಭಾಷ್ಯವನ್ನು ತುಂಬಾ ತೀವ್ರತೆಯಿಂದ ಚರ್ಚಿಸಿದರಂತೆ. ಅವರು ವ್ಯಾಸರೆಂದು ಶ್ರೀ ಶಂಕರಾಚಾರ್ಯರಿಗೆ ತಿಳಿದೊಡನೆ, ಅವರಿಗೆ ಅಡ್ಡಬಿದ್ದಾಗ, ಭಗವಾನ್ ವ್ಯಾಸರು ಭಾಷ್ಯವನ್ನು ತುಂಬಾ ಹೊಗಳಿ ತಮ್ಮ ಮೆಚ್ಚುಗೆ, ಅದಕ್ಕೆ ತಮ್ಮ ಅನುಮೋದನೆ, ತಿಳಿಸಿದರಂತೆ ಅಹಂಕಾರ ರವಷ್ಟಾದರೂ ಇದ್ದ ಇನ್ನ್ಯಾರಿಗಾಗಿದ್ದರೂ ಆಗ ಪ್ರಥಮವಾಗಿ ಅಂಥ ಹೊಗಳಿಕೆಯಿಂದ ತನ್ನ ಸಮರ್ಥತೆಯ ಬಗ್ಗೆ ಹಿಗ್ಗು ಉಂಟಾಗುತ್ತಿತ್ತು ಆದರೆ ಶ್ರೀ ಶಂಕರಾಚಾರ್ಯರಿಗೆ ಒಡನೆಯೇ ಬಂದ ಭಾವನೆಯೇನಂದರೆ, ತನ್ನ ಈ ಗುರುದಕ್ಷಿಣೆಯ ಕಾರ್ಯ ಮುಗಿದಂತಾಯಿತು; ಆಯುಷ್ಯವೂ ಮುಗಿಯಿತು ವ್ಯಾಸರಂಥ ದಿವ್ಯ ಪುರುಷರನ್ನು ಕಾಣುತ್ತ ದೇಹತ್ಯಾಗಮಾಡುವುದು ಒಳ್ಳೆಯದಲ್ಲವೇ ? ಎಂದು. ಆದ್ದರಿಂದ ಅದಕ್ಕಾಗಿ ಭಗವಾನ್ ವ್ಯಾಸರ ಅಪ್ಪಣೆಯನ್ನು ಕೇಳಿದ್ದಾಯಿತು ! ಆದರೆ ವ್ಯಾಸರು ಅನುಮತಿ ಕೊಡದೆ, ಭಾಷ್ಯದ ಪ್ರಚಾರವೆಂಬ ಕಷ್ಟವಾದ ಕೆಲಸವನ್ನೂ ಅವರಿಗೆ ಒಪ್ಪಿಸಿ ಅದಕ್ಕಾಗಿ ಮತ್ತೆ ಹದಿನಾರು ವರ್ಷಗಳ ಆಯುಷ್ಯವನ್ನು ಕೊಟ್ಟರಂತೆ ! ಶ್ರೀ ಶಂಕರಾಚಾರ್ಯರಂಥ ಪರಿಪೂರ್ಣರಾದ ಜೀವನ್ಮುಕ್ತರಿಗಲ್ಲದೆ ಇತರರಲ್ಲಿ ಈ ವರ್ತನೆ ಸಾಧ್ಯವೇ ?

ಈ ಭಾಷ್ಯದ ಪ್ರಚಾರಕಾರ್ಯವಾಗಿ ಶ್ರೀಶಂಕರಾಚಾರ್ಯರು ಹೊತ್ತ ದಿಗ್ವಿಜಯದ ಪ್ರಥಮ ಘಟ್ಟವು ಅತ್ಯಂತ ಮಹತ್ವಾದ ಘಟ್ಟವೂ ಆಗಿತ್ತು. ಮಂಡನ ಮಿಶ್ರರನ್ನು ಗೆದ್ದರೆ ಮುಂದೆಯೂ ಜಯ ಉಂಟಾಗುವ ಸಂಭವ ಅತಿ ಹೆಚ್ಚು ಆದರೆ ಸೋತರೆಂದಾದರೆ ದಿಗ್ವಿಜಯವು ಆರಂಭದಲ್ಲೇ ನಾಶ ಹೊಂದಿದಂತಾಯಿತು. ಆದರೂ ಶ್ರೀ ಶಂಕರಾಚಾರ್ಯರು ಆ ವಾದದ ಮಧ್ಯಸ್ಥಿಕೆಗೆ ತಮ್ಮ ಎದುರಾಳಿಯ ಪತ್ನಿಯನ್ನೇ ಆರಿಸಬೇಕೇ! ಇದು ಮಂಡನ ಮಿಶ್ರರಿಗೇ ಅತ್ಯಾಶ್ಚರ್ಯ ಉಂಟುಮಾಡಿತು ಅದಕ್ಕೆ ಶ್ರೀಶಂಕರಾಚಾರ್ಯರು ಸಮಾಧಾನ ಹೇಳಿದ್ದೇನೆಂದರೆ, ಉಭಯ ಭಾರತಿಯು ಶಾಸ್ತ್ರವನ್ನು ಅತಿಚೆನ್ನಾಗಿ ಒಲ್ಲವಳೆಂದು ಖ್ಯಾತಿಪಡೆದವಳು. ಮಧ್ಯಸ್ಥಿಕೆ ವಹಿಸಿದಾಗ ಯಾವ ಪಕ್ಷಪಾತವನ್ನೂ ತೋರಿಸಕೂಡದೆಂಬುದು ಸನಾತನಧರ್ಮ ಬಲ್ಲವರ ಕ್ರಮ ಆದ್ದರಿಂದ ಉಭಯ ಭಾರತಿಯಿಂದ ತನಗೆ ಎಷ್ಟಕ್ಕೂ ಅನ್ಯಾಯವಾಗದು, ಎಂದು. ತಾನು ಕಳ್ಳ; ಪರರ ನಂಬ. ಆದರೆ ಶ್ರೀಶಂಕರಾಚಾರ್ಯರ ಹೃದಯದಲ್ಲಿ ರವಷ್ಟಾದರೂ ಇತರರ ಮೇಲಿನ ಅಪನಂಬಿಕೆ ಯಿದ್ದಿಲ್ಲ ಎಂಬುದಕ್ಕೆ ಇದು ಧಾರಾಳ ಸಾಕ್ಷಿ. ಎಂಥ ಅದ್ವಿತೀಯ ಪರಿಶುದ್ಧತೆಯ ಮಟ್ಟ ಅವರದ್ದು !

ಈ ವಾದದಲ್ಲೂ, ಆದ್ದರಿಂದ ಅವರ ಪ್ರತಿ ಇತರ ವಾದದಲ್ಲೂ, ಅವರಿಗಿದ್ದ ಮನಃಪೂರ್ವಕತೆಯ ಮಟ್ಟ ನಮ್ಮನ್ನು ಸಂಪೂರ್ಣವಾಗಿ ಬೆರಗುಮಾಡುತ್ತದೆ. ಮಂಡನ

ಮಿಶ್ರರು ತಮ್ಮನ್ನು ಸೋಲಿಸಿದರೆ ತಾವು ಗೃಹಸ್ಥಾಶ್ರಮ ಸ್ವೀಕರಿಸುವುದಾಗಿ ಅವರು ಪ್ರತಿಜ್ಞೆಮಾಡಿದ್ದರು. ಒಮ್ಮೆ ಸಂನ್ಯಾಸ ಸ್ವೀಕರಿಸಿದವ ಪುನಃ ಗೃಹಸ್ಥಾಶ್ರಮಕ್ಕೆ ಹೋಗುವುದು ತೀರಾ ಪಾಪಕರ; ಅದಕ್ಕೆ ಪ್ರಾಯಶ್ಚಿತ್ತ ದೇಹತ್ಯಾಗ ಮಾತ್ರ. ಸತ್ಯತೆಯ ನಿರ್ಧಾರ ಮಾತ್ರ ಮುಖ್ಯ, ಗೆಲವು ಸೋಲು ಅಲ್ಲ, ಎಂಬುದು ಆಕಾಲದ ಧ್ಯೇಯವಾಗಿತ್ತು. ಆದ್ದರಿಂದಲೇ ಶ್ರೀ ಶಂಕರಾಚಾರ್ಯರಿಂದ ಸೋಲಿಸಲ್ಪಟ್ಟವರೆಲ್ಲ ಅವರ ಪಂಥ ಒಪ್ಪಿ, ಇಡೀ ದೇಶವೇ ಬಹುಬೇಗ ಪುನಃ ಶುದ್ಧವಾದ ಅದ್ವೈತ ವೇದಾಂತದ ದಾರಿಗೆ ಬಂತು ಈ ಕಾಲದಲ್ಲಾದರೋ ಧರ್ಮ ಏನೂ ತಿಳಿಯದೆಯೂ. ವಾದಿಸುವುದು, ಒಂದು ವಿಷಯದಲ್ಲಿ ತಪ್ಪಿಬಿದ್ದುದು ರುಜುವಾದರೂ, ಮತ್ತೇನನ್ನೊ ವಾದಿಸಿ, ಅಂತೂ ತಮ್ಮ ಸೋಲನ್ನು ಎಷ್ಟಕ್ಕೂ ಒಪ್ಪದಿರುವುದು ಕ್ರಮವಾಗಿದೆ ಇದರ ಇನ್ನೊಂದು ರೂಪ ವಾದಿಸಿದವರೊಡನೆ ಕೋಪಗೊಳ್ಳುವುದು.

ಶ್ರೀ ಮಧ್ವಾಚಾರ್ಯರಿಗೂ ಆ ಕಾಲದಲ್ಲಿ ಶೃಂಗೇರಿ ಪೀಠದಲ್ಲಿದ್ದ ವಿದ್ಯಾಶಂಕರರಿಗೂ ತಿರುವಾನ್‌ಕೂರು ರಾಜರ ಆಶ್ರಯದಲ್ಲಿ ವಾದ ನಡೆದಾಗಿ ವಾದವು ಏನೇನೋ ಅಡ್ಡದಾರಿ ಹಿಡಿದು ಇತ್ಯರ್ಥಕ್ಕೆ ಬಾರದಾಯಿತಂತೆ ಅಂದಿನಿಂದ ಶ್ರೀಮಧ್ವಾಚಾರ್ಯರ ಅದ್ವೈತದ ಮೇಲಿನ ಅಪಾರದ್ವೇಷ ಪ್ರಕಟವಾಯಿತಂತೆ. ಈ ದ್ವೇಷದಿಂದಲೇ ಅವರ ಒಂದು ಪ್ರತಿಪಾದನೆಯಾಗಿ ಅದ್ವೈತಿಗಳಂಥ ಪಾಪಿಗಳಿಗೆ ಯಾವ ಕಾಲಕ್ಕೂ ಮುಗಿಯದ ನಿರಂತರವಾದ ನರಕ ಮಾತ್ರ ಗತಿ ಯೆಂಬ ವಿಚಿತ್ರ ಪ್ರತಿಪಾದನೆ ಹೊರಡಿತಂತೆ ವಿಚಿತ್ರದ್ದು, ಏಕೆಂದರೆ ದ್ವೇಷದ ರಭಸದಲ್ಲಿ ಹೊರಟ ಈ ತತ್ವ ದೇವರನ್ನು ನ್ಯಾಯ ಪರತೆ ಕರುಣೆ ಇಲ್ಲದ ರಾಕ್ಷಸನನ್ನಾಗಿ ಮಾಡುತ್ತದೆ. ಹೇಗೆಂದರೆ, ಜೀವಾತ್ಮನು ತನ್ನ ತೀರಾ ಅಲ್ಪತರದ್ದಾದ ದೇಹದಿಂದ ತೀರಾ ಚುಟುಕಾದ ಆಯುಷ್ಯದಿಂದ ಮತ್ತು ತೀರಾ ಮಿತವಾದ ಶಕ್ತಿಯಿಂದ ತೀರಾ ಮಿತವಾದ ತಪ್ಪನ್ನು ಮಾತ್ರವೇ ಮಾಡಲು ಸಾಧ್ಯನಾಗುತ್ತಾನೆ. ನ್ಯಾಯಪರತೆ ಇದ್ದಲ್ಲಿ ಅದಕ್ಕೆ ಮಿತವಾದ ಶಿಕ್ಷೆಮಾತ್ರವೇ ವಿಧಿಸಲ್ಪಡಬೇಕು. ಎಂದೆಂದಿಗೂ ಮುಗಿಯದ ಅಮಿತ ಕಠಿಣತೆಯದವಲ್ಲ. ಮತ್ತು ಹಾಗೆ ಅತಿದೀರ್ಘಕಾಲ ನರಕಯಾತನೆ ಅನುಭವಿಸಿದ ಜೀವಾತ್ಮನು ತನ್ನ ತಪ್ಪಿಗಾಗಿ ಅತ್ಯಂತ ದುಃಖಿಸಿ; ಪಶ್ಚಾತ್ತಾಪ ಪಟ್ಟು, ದೇವರೊಡನೆ ಕ್ಷಮಿಸಲು ನಿರಂತರವಾಗಿ ಬೇಡುತ್ತಿರುವಾಗಕೂಡ ಅವನನ್ನು ಕ್ಷಮಿಸಿ ತಿದ್ದಿಕೊಳ್ಳಲು ಮತ್ತೊಂದು, ಮರುದೊಂದು, ಸಂದರ್ಭಕೊಡದ ದೇವರಲ್ಲಿ ಕರುಣೆ ರವಷ್ಟಾದರೂ ಉಂಟೆಂದಾಯಿತೇ ? ಆದ್ದರಿಂದಲೇ ಶ್ರೀ ಮಧ್ವಾಚಾರ್ಯರ ಈ ವಿಚಿತ್ರ ಪ್ರತಿಪಾದನೆಗೆ ನಮ್ಮ ಸನಾತನ ಧರ್ಮದಲ್ಲಿ ಬೇರೆ ಎಲ್ಲೂ ಬೆಂಬಲವೇ ಸಿಕ್ಕುವುದಿಲ್ಲ ಕ್ರಿಶ್ಚನ್ ಮತದಂತ ಅಪೂರ್ಣಮತದ ಪ್ರತಿಪಾದನೆಯ ತರದ್ದು ಅದು.

ತಪ್ಪುವಾದವನ್ನು ಖಂಡಿಸಲೇ ಬೇಕು. ಏಕೆಂದರೆ ಅದು ಅಪಾಯಕರ. ಆದರೆ ವಾದಿಸುವವನು ಮನಃ ಪೂರ್ವಕತೆಯುವನಿರಬಹುದು ಅವನನ್ನು ತಿದ್ದುವುದೇ ದಾರಿಯಲ್ಲದೆ ಅವನನ್ನು ದ್ವೇಷಿಸುವುದು ಮಹಾಪುರುಷರಿಗೆ ದಾರಿಯಲ್ಲ, ಎನ್ನುತ್ತದೆ ನಮ್ಮ ಧರ್ಮ. ಶ್ರೀ ಶಂಕರಾಚಾರ್ಯರು, ದೇವರಿಲ್ಲ ಆತ್ಮವಿಲ್ಲ ಎಂಬ ತೀರಾ ತಪ್ಪುದಾರಿ ಹಿಡಿದ ಬುದ್ಧ ಧರ್ಮವನ್ನು ತೀರಾ ಖಂಡಿಸಿದವರಾದರೂ ಅಪಾರತ್ಯಾಗಿಯೂ ಕರುಣಾಮಯಿಯೂ ಆದ ಬುದ್ಧನನ್ನು ಒಮ್ಮೆಯಾವರೂ ಖಂಡಿಸಿದ್ದಾಗಲಿ, ನಿಂದಿಸಿದ್ದಾಗಲಿ, ನಡೆಸಿದ್ದಿಲ್ಲ. ಅವರ ಅತ್ಯಂತ ಮೇಲ್ತರದ ಶೀಲದ ಈ ವರ್ತನೆಯ ದೃಷ್ಟಾಂತ ತಮ್ಮೆದುರು ದಾರಾಳವಾಗಿ ಇದ್ದಿತ್ತಾದರೂ. ಆದಕ್ಕೆ ತೀರಾ ಕುರುಡರಾಗಿದ್ದ ಆಚಾರ್ಯರು ಕೆಲವರು ಮುಂದೆ ಶ್ರೀ ಶಂಕರಾಚಾರ್ಯರ ವಿಚಾರದಲ್ಲಿ ತಮ್ಮ ವೈಯಕ್ತಿಕ ದ್ವೇಷದಕಾರ್ಯ ತುಂಬಾ ನಡೆಸಿದ್ದುಂಟು !

ಶ್ರೀ ಶಂಕರಾಚಾರ್ಯರು, ನಿರಾಕಾರನೂ ನಿರ್ಗುಣನೂ ಚಿಂತೆಗೆ ಅತೀತನೂ ಆದ ಪರಬ್ರಹ್ಮವು ಮಾತ್ರವೇ ಶಾಶ್ವತವಾದ ಏಕಮಾತ್ರ ಸತ್ಯ ಎಂಬ ಉಪನಿಷತ್ತುಗಳ ಸಾರವನ್ನು ಭೋದಿಸಿದವರು. ಎಂದರೆ ದೇವರ ಸಗುಣೋಪಾಸನೆ ಪರಮಸತ್ಯವಲ್ಲ ಎಂದವರು. ಆದರೂ ಸರ್ವಸಾಮಾನ್ಯರಾದ ಜನರು ದೇವರ ನಿರ್ಗುಣೋಪಾಸನೆ ಮಾಡಲಾರದವರೆಂದು ಬಲ್ಲವರಾದ್ದರಿಂದ ಅವರ ಸಾರ್ಥಕತೆಗೆಂದು ದೇವರ ಸುಗುಣೋಪಾಸನೆಯನ್ನೂ ಧಾರಾಳವಾಗಿ ಪ್ರೋತ್ಸಾಹಿಸಿದವರು. ಅನಂತನಾದ ದೇವರಿಗೆ ಹಲವು ರೂಪಗಳನ್ನು ಧರಿಸುವುದು ಸಾಧ್ಯವಾದ್ದರಿಂದ ಮತ್ತು ಜೀವಾತ್ಮರು ಅವರವರ ಪೂರ್ವಜನ್ಮಗಳ ಸಾಧನಗಳ ಫಲವಾಗಿ ತರತರದ ದೇವರುಗಳಿಂದ, ಸಾಧನಾಕ್ರಮಗಳಿಂದ, ಆಕರ್ಷಿತರಾಗುವುದರಿಂದ, ಈ ಭಿನ್ನ ಒಲವುಗಳನ್ನೂ ಅವರು ಪ್ರೋತ್ಸಾಹಿಸಿದವರೇ ಆಗಿದ್ದರು. ಅವರಿಗಾಗಿ ಬೇರೆ ಬೇರೆ ದೇವರುಗಳಿರುವ ದೇವಸ್ಥಾನಗಳನ್ನು ನಿರ್ಮಿಸಿದ್ದಲ್ಲದೆ, ಬೇರೆ ಬೇರೆ ದೇವರುಗಳ ಪರವಾದ ಅತ್ಯಂತ ಲಲಿತವಾದ ಸ್ತೋತ್ರಗಳನ್ನೂ ರಚಿಸಿಕೊಟ್ಟರು. ತನ್ಮೂಲಕ ಅವರು ತಮ್ಮ ಹೃದಯದ ಅಪಾರ ವಿಶಾಲತೆಯ ಮಟ್ಟವನ್ನು ವ್ಯಕ್ತಮಾಡಿದರು.

ಆದರೆ ಆ ಮೇಲೆ ಬಂದ ಯಾವ ಆಚಾರ್ಯರಿಗೂ, ಜನಸಾಮಾನ್ಯರ ಭಿನ್ನ ಒಲವುಗಳ ಬಗ್ಗೆ, ಸಾಧನಾಮಟ್ಟಗಳ ಬಗ್ಗೆ, ಯಾವ ಭಿನ್ನತೆಯೂ ಸಹ ನೀಯುವಾಗಲಿಲ್ಲ. ತಾವು ಅತಿಶ್ರೇಷ್ಠ ಎಂದು ನಿರ್ಧರಿಸಿದ ದೇವರನ್ನು ಮಾತ್ರವೇ ತಾವು ನಿರ್ಧರಿಸಿದ ರೀತಿಯಲ್ಲಿ ಮಾತ್ರವೇ, ಪೂಜಿಸಬೇಕು; ಇತರರನ್ನಲ್ಲ ಎಂದರು ಇವರು ರುಕ್ಮಿಣೀ ಕೃಷ್ಣನನ್ನಲ್ಲಿ, ರಾಧಾಕೃಷ್ಣರನ್ನೇ ಮುಖ್ಯವೆಂದು ಪೂಜಿಸಿರಿ, ಎಂದ ಆಚಾರ್ಯರೂ ಇದ್ದಾರೆ. ಶ್ರೀ ಮಧ್ವಾಚಾರ್ಯರಂತೂ ಹರಿಯ ಆರಾಧನೆ ತಮ್ಮ ಮೂಲಕ ನಡೆಸಿದರೆ ಮಾತ್ರವೇ ಫಲಕಾರಿ ಯಾಗುತ್ತದೆ ಎಂಬ ಕ್ರಿಶ್ಚನ್ ಮತದಲ್ಲಿ

ಕಾಣುವಂಥ ಹಿಂದೂ ಧರ್ಮದಲ್ಲಿ ಎಲ್ಲೂ ಕಾಣದಂಥ, ತತ್ವ ಪ್ರತಿಪಾದಿಸಿದವರು ಶ್ರೀ ಶಂಕರಾಚಾರ್ಯರ ಅದ್ವಿತೀಯ ಉದಾರತೆ ಯಲ್ಲಿ! ಇವರೆಲ್ಲರ ಕ್ರಮದ ಸಂಕೋಚತನದ ಮಟ್ಟವೆಲ್ಲಿ.

ಸಾಮಾನ್ಯಮಟ್ಟದ ಜನರು ತಮ್ಮ ಧರ್ಮ ಶಾಸ್ತ್ರವನ್ನು ಚೆನ್ನಾಗಿ ತಿಳಿದವರಲ್ಲ ಪ್ರತಿ ಆಚಾರ್ಯರೂ ಅವರಿಗಿಂತ ಎಷ್ಟೋ ಹೆಚ್ಚಿನ ಮೇಧಾವಿಗಳೂ ಶಾಸ್ತ್ರ ಕಲಿತವರೂ ಆಗಿದ್ದು, ತಮ್ಮ ವಾಕ್ಚಾತುರ್ಯದಿಂದ ತಮ್ಮ ಪಂಥ ಮಾತ್ರವೇ ಅತ್ಯುತ್ತಮ ಎಂದು ಸಾಮಾನ್ಯರು ಒಪ್ಪುವಂತೆ ಮಾಡಿದರೆ ಅದು ಆಶ್ಚರ್ಯವಲ್ಲ ಅವರ ಪ್ರತಿಪಾದನೆಯಲ್ಲಿ ಅನೇಕ ದೋಷಗಳಿರಬಹುದು. ಆದರೆ ಸಾಮಾನ್ಯರಿಗೆ ಅವು ತಿಳಿಯದಾದಾವು, ಅನೇಕ ಕ್ರಿಶ್ಚನ್ ಪ್ರಚಾರಕರ ಕ್ರಮ ಈ ತರದ್ದು. ಕೆಲವು ಹೊಸ ಪಂಥಗಳ ಆಚಾರ್ಯರೂ ಈ ದಾರಿ ಹಿಡಿದವರೇ ಎಂಬುದನ್ನು ಅವರ ಶಿಷ್ಯರು ಮುಖ್ಯವಾಗಿ ಕೆಳಮಟ್ಟದ ಬ್ರಾಹ್ಮಣವರ್ಗದವರು, ಪತಿತರು, ಬನಿಯಾ ಮತ್ತು ಕೃಷಿ ವೃತ್ತಿಯವರು. ಇರುವುದರಿಂದ ಊಹಿಸಬಹುದು. ಈತರದ ತಮ್ಮ ಪ್ರಚಾರಕ್ಕೆ ಸ್ಥಳೀಯ ಭಾಷೆಯನ್ನುಪಯೋಗಿಸಿ ಈ ಮಟ್ಟದವರನ್ನು ಆಕರ್ಷಿಸಿದ್ದೂ ಉಂಟು. ಈ ತರದ ಮತಾಂತರದ ಕ್ರಮವೆಂದರೆ, ಕುಟುಂಬದ ತಂದೆಯೊಡನೆ ವಾದಿಸಲು ಹೆದರಿ, ಮಕ್ಕಳಲ್ಲಿ ಕೆಲವರನ್ನು ಮಾತ್ರ ಪ್ರತ್ಯೇಕಿಸಿ ಭೋಧಿಸಿ ವಲಿಸಿ ಅವರನ್ನು ತಂದೆಯಿಂದ ಪ್ರತ್ಯೇಕಿಸಿದಂತೆ. ಆದರೆ ಶ್ರೀ ಶಂಕರಾಚಾರ್ಯರು ಈ ಕ್ರಮಗಳನ್ನು ಉಪಯೋಗಿಸಿದವರೇ ಅಲ್ಲ. ನಮ್ಮ ಧರ್ಮದ ಆಧಾರಗ್ರಂಥಗಳಿರುವುದು ಸಂಸ್ಕೃತದಲ್ಲಾದ್ದರಿಂದ ಅದರ ಜ್ಞಾನವಿಲ್ಲದವರೊಡನೆ ವಾದಕ್ಕೆ ಹೋದವರಲ್ಲ. ಬೇರೆ ಬೇರೆ ಪಂಥಗಳ, ಅವರವರ ಶಾಸ್ತ್ರಗಳನ್ನು ಚೆನ್ನಾಗಿ ಬಲ್ಲ, ಅದ್ವಿತೀಯ ಪಂಡಿತರನ್ನೇ ಎದುರಿಸಿ ಅವರನ್ನು ಸೋಲಿಸಿ ತಮ್ಮ ವಾದವೇ ನಿಜಕ್ಕೂ ಅತ್ಯಂತ ಶ್ರೇಷ್ಟವಾದುದು ಎಂಬುದನ್ನು ಸ್ಥಾಪಿಸಿದರು. ಅವರದ್ದು ಸತ್ಯತೆಯ ರಾಜಮಾರ್ಗ ಉಪಾಯದ ಅಡ್ಡದಾರಿಯಲ್ಲ

ಪ್ರತಿ ಆಚಾರ್ಯರ ಜೀವನದಲ್ಲೂ ಅನೇಕ ಅಮಾನುಷ ಕಾರ್ಯಗಳನ್ನು ನಡೆಸಿದ ಕತೆಗಳಿವೆ. ಇವು ಶಿಷ್ಯರ ಉತ್ಸಾಹದ ಕಲ್ಪನೆಗಳೋ, ನಿಜವಾಗಿ ನಡೆದವೋ ಹೇಳುವುದು ಕಷ್ಟ ಆದರೆ ಶ್ರೀ ಶಂಕರಾಚಾರ್ಯರ ಜೀವನದಲ್ಲಿ ಬರುವಂಥವು, ಅವರ ಹೃದಯ ಥಕ್ಕನೆ ಕರುಣೆಯಿಂದ ತುಂಬಿದಾಗ, ಕೇವಲ ಸಹಾಯ ಮಾಡಬೇಕೆಂಬ ಭರದಲ್ಲಿ ನಡೆದವು ಮಾತ್ರ ಎಂಬುದು ವ್ಯಕ್ತವಾಗುತ್ತದೆ. ಅವರು ಪೂರ್ಣಾನದಿಯನ್ನು ಮನೆಯ ಹತ್ತಿರ ತಂದುದು, ಬಿಕ್ಷೆ ಹಾಕುವ ಸಮರ್ಥತೆ ಇಲ್ಲದ ಬ್ರಾಹ್ಮಣಳ ಬಡತನ ಪರಿಹಾರಕ್ಕೆ ಚಿನ್ನದ ಮಳೆ ಸುರಿಸಿದ್ದು (ಆ ಬ್ರಾಹ್ಮಣಿಯ ಕುಟುಂಬದವರೂ ಈಗಲೂ ಇದ್ದಾರೆ) ಮುಂತಾದವು ಈತರದವು

ಆದರೆ ಇತರ ಆಚಾರ್ಯರ ಕೆಲವು ಅಮಾನುಷ ಕಾರ್ಯಗಳು ಕೇವಲ ಅವರ ಸಮರ್ಥತೆಯ, ಹಿರಿಮೆಯ, ಸ್ಥಾಪನೆಗೆ ನಡೆಸಲ್ಪಟ್ಟವು ಎಂಬುದೂ ವ್ಯಕ್ತವಾಗುತ್ತದೆ. ಆದರೆ ಮಹಾತ್ಮರಿಗೆ ಸಿದ್ಧಿಯ ಶಕ್ತಿ ಇದ್ಧರೂ ಅದರ ಈ ತರದ ಉಪಯೋಗ ಹೇಳಿಸಿಲ್ಲ.

ಹೀಗೆ ಹಲವಾರು ದೃಷ್ಟಾಂತಗಳಿಂದ, ಶ್ರೀ ಶಂಕರಾಚಾರ್ಯರ ಶೀಲದ, ವರ್ತನೆಯ, ಶಾಸ್ತ್ರೀಯ ಕ್ರಮಗಳ, ಆಚರಣೆಯ, ಅಪಾರ ಆತ್ಮ ವಿಶಾಲತೆಯ, ನಿರ್ಮಮಕಾರದ ಮನೋ ವೃತ್ತಿಯ, ನಿದರ್ಶನಗಳಿಂದ ಅವರು ನಿಜಕ್ಕೂ ಅದ್ವಿತೀಯ ಮಟ್ಟದ ಆಚಾರ್ಯರೆಂಬುದು ಧಾರಾಳವಾಗಿ ಸ್ಪಷ್ಟವಾಗುತ್ತದೆ.



## ೫. ಶ್ರೀಶಂಕರಾಚಾರ್ಯರು ಏಕಮಾತ್ರ ಯುಗಾಚಾರ್ಯರು.

ಹಿಂದಿನ ಅಧ್ಯಾಯಗಳಲ್ಲಿ ಶ್ರೀ ಶಂಕರಾಚಾರ್ಯರಿಗೂ ಅನಂತರ ಬಂದ ಆಚಾರ್ಯರಿಗೂ ಮಟ್ಟದಲ್ಲಿ ಬಹಳವಾದ ವ್ಯತ್ಯಾಸವಿರುವುದನ್ನು ಕಂಡೆವು ಈ ಹೊಸ ಆಚಾರ್ಯರೆಲ್ಲ ಒಬ್ಬೊಬ್ಬರು ಒಂದೊಂದು ತರದ ಭಿನ್ನತೆಯಿರುವ ತಮ್ಮ ತಮ್ಮ ಪಂಥಗಳನ್ನೇ ಪರಮ ಸತ್ಯವೆಂದು ಪ್ರತಿಪಾದಿಸಿದವರು. ಅವರೆಲ್ಲರೂ ಒಂದುಕಡೆ ಕೂಡಿದ್ದರೆ ಯಾರ ಪಂಥ ಮಾತ್ರ ಸತ್ಯವೆಂದು ಎಷ್ಟಕ್ಕೂ ನಿರ್ಧಾರಕ್ಕೆ ಬರುತ್ತಿರಲಿಲ್ಲ. ಆದರೆ ನಿಜವಾದ ತತ್ವವು ಹಲವುತರದ್ದಾಗಿರಲು ಸಾಧ್ಯವಲ್ಲ ಅದು ಒಂದೇ ಒಂದಾಗಿರುವುದು ಮಾತ್ರವೇ ಸಾಧ್ಯ. ಎರಡಕ್ಕೆ ಮೂರು ಕೂಡಿಸಿದರೆ ಐದು ಮಾತ್ರವೇ ಆಗುತ್ತದೆ. ಆಚಾರ್ಯರನ್ನು ಹೊಂದಿಕೊಂಡು ನಾಲ್ಕು ಅಥವಾ ಆರು ಅಥವಾ ಎಂಟು ಆಗದು. ಈ ಸತ್ಯತೆಯನ್ನು ಶ್ರೀ ಶಂಕರಾಚಾರ್ಯರು ಚನ್ನಾಗಿ ಪ್ರತಿಪಾದಿಸಿದ್ದಾರೆ, ಹೇಗೆಂದರೆ:

ಕ್ರಿಯಾಯಾಮಿವ ವಸ್ತುನಿ ವಿಕಲ್ಪಸ್ಯ ಅಸಂಭವಾತ್.

ಎಂದರೆ ಕರ್ಮಭಾಗದಲ್ಲಿ ಒಂದೇ ಫಲ ತರಲಿಕ್ಕೆ ಭಿನ್ನ ಭಿನ್ನ ತರದ ಕ್ರಮಗಳು ಸಾಧ್ಯವಾಗಬಹುದಾದರೂ, ಸತ್ಯತೆಯಲ್ಲಿ ಇದು ಸಾಧ್ಯವಲ್ಲ, ಎಂದು. ಜೀವಾತ್ಮನ ಬಂಧನಕ್ಕೆ ಅವನ ಅವಿದ್ಯೆಯೇ ಕಾರಣವೆಂದಾದಮೇಲೆ ಅವನ ಬಂಧನದ ವಿಮೋಚನೆ ಜ್ಞಾನದಿಂದಮಾತ್ರವೇ ಸಾಧ್ಯ ಎಂಬುದು ಈತರದ ಅತಿಮುಖ್ಯ ಸತ್ಯತೆ. ಅದ್ವೈತವೇ ಈ ಶಾಶ್ವತವಾದ ಸತ್ಯತೆಯ ಜ್ಞಾನ. ಪ್ರತಿ ಯುಗದಲ್ಲೂ ಒಮ್ಮೆ ಈ ಪರಮ ಸತ್ಯವನ್ನು ಆಯಾಯ ಯುಗದ ಲಕ್ಷಣಕ್ಕೆ ತಕ್ಕಂತೆ ಪ್ರತಿಪಾದಿಸಲಿಕ್ಕೆ ಭಗ

ವಂತನ ವ್ಯವಸ್ಥೆಯಿದೆ. ಆಮೇಲೆ ಅದು ಆಯುಗದಲ್ಲೆಲ್ಲ ಕೆಲಸಮಾಡುತ್ತದೆ. ಶ್ರೀ ಶಂಕರಾಚಾರ್ಯರು ಕಲಿಯುಗದಲ್ಲಿ ಈ ತರದ ಕೆಲಸಮಾಡಲಿಕ್ಕಿದ್ದ ಅದ್ವೈತ ಜ್ಞಾನದ ಪ್ರತಿಪಾದನೆಗಾಗಿ ಅವತರಿಸಿದ ಜ್ಞಾನಾವತಾರ ಅಂಥವರ ಅವತಾರ ಕಲಿಯುಗಕ್ಕೆ ಇನ್ನು ಬೇಕಿಲ್ಲ ಉಳಿದ ಆಚಾರ್ಯರು ಅನೇಕರು ಬಂದಿದ್ದಾರೆ; ಮುಂದೆಯೂ ಬಾರದಿರರು. ಆದರೆ ಅವರೆಲ್ಲ ಆಗಾಗ ಅಲ್ಲಲ್ಲಿನ ಧಾರ್ಮಿಕ ಹಾನಿ ವಿಶೇಷತೆಯನ್ನು ತಿದ್ದಲಿಕ್ಕೆ ಬೇಕಾದ ಆಚಾರ್ಯರುಗಳು; ಯುಗಾವತಾರಗಳಲ್ಲ.

ಈ ಜ್ಞಾನ ಗುರುಗಳ ಯುಗಯುಗಾಂತರದ ಅವತಾರಗಳನ್ನು ಪುರೀಗೋವರ್ಧನ ಪೀಠದ ಶ್ರೀ ಭಾರತಿಕೃಷ್ಣತೀರ್ಥರು ಒಮ್ಮೆ ಚೆನ್ನಾಗಿ ವಿವರಿಸಿದ್ದರು, ಅವಲ್ಲಿ ಪ್ರಥಮದ್ದು ಕೃತಯುಗದ ದಕ್ಷಿಣಾಮೂರ್ತಿ; ಎರಡನೆಯದು ತ್ರೇತಾಯುಗದ ಶ್ರೀ ದತ್ತಾತ್ರೇಯ; ಮೂರನೆಯದು ದ್ವಾಪರದ ಭಗವಾನ್ ವ್ಯಾಸರು; ಮತ್ತು ನಾಲ್ಕನೆಯದು ಕಲಿಯುಗದ ಶ್ರೀ ಶಂಕರಭಗವತ್ಪಾದರು. ಈ ನಾಲ್ಕು ಆಚಾರ್ಯರ ಜ್ಞಾನ ಪ್ರಚಾರಕ್ರಮವೂ ತುಂಬಾ ಅರ್ಥಗರ್ಭಿತವಾಗಿದೆ.

ಕೃತವು ಅತ್ಯಂತ ಪರಿಶುದ್ಧವಾದ ಪ್ರಥಮಯುಗ ಕೃತಕೃತ್ಯಾನಾರಿ ಯುಗಂ ಕೃತಯುಗಂ, ಆ ಕಾಲದ ಜನರು ತಮ್ಮ ಸ್ವಧರ್ಮವನ್ನು ಸಂಪೂರ್ಣವಾಗಿ ಪರಿಪಾಲಿಸುತ್ತಿದ್ದು ಕೃತಕೃತ್ಯರಾಗಿರುವವರು, ಆದ್ದರಿಂದ ತನ್ಮೂಲಕ ಸಂಪೂರ್ಣವಾಗಿ ಚಿತ್ತಶುದ್ಧಿ ಹೊಂದಿದವರು, ಏಕೆಂದರೆ ಶ್ರೀ ಕೃಷ್ಣನು ಗೀತೆಯಲ್ಲಿ ಹೇಳಿದಂತೆ

ಯಜ್ಞ ದಾನ ತಪಃ ಕರ್ಮ ನ ತ್ಯಾಜ್ಯಂ ಕಾರ್ಯ ಮೇವತತ್ ॥
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ।

ಎಂದರೆ ಯಜ್ಞ, ದಾನ, ತಪಸ್ಸು ಮತ್ತು ಶಾಸ್ತ್ರವಿಧಿಸುವ ಕರ್ಮಾಚರಣೆಗಳು ಚಿತ್ತವನ್ನು ಶುದ್ಧಿಮಾಡುವಂಥವು. ಆದ್ದರಿಂದ ಅವನ್ನು ಬಿಡಕೂಡದು; ಆಗತ್ಯವಾಗಿ ಆಚರಿಸಲೇಬೇಕು. ಹಾಗೆ ಮಾಡುತ್ತಿದ್ದ ಕೃತಯುಗದ ಜನರು ಬ್ರಹ್ಮಜ್ಞಾನವು ತಮ್ಮಲ್ಲಿ ಮೂಡಲಿಕ್ಕೆ ತಯಾರಾದ ಅಧಿಕಾರಿಗಳಾಗಿದ್ದರು. ಸನಕ ಸನಂದನ ಸನತ್ಕುಮಾರ ಸನತ್ಸುಜಾತರು ಆ ಕಾಲದ ಇಂಥವರಲ್ಲಿ ಪ್ರಥಮಶ್ರೇಣಿಯವರು. ಪೂರ್ಣಜ್ಞಾನ ಪಡೆಯಲು ತಯಾರಾದ ಅವರು ತಮ್ಮಷ್ಟಕ್ಕೇ ಪ್ರೇರಿತರಾಗಿ ಯುಗದ ಆದಿಜಗದ್ಗುರುವಾದ ದಕ್ಷಿಣಾಮೂರ್ತಿಯನ್ನು ಹುಡುಕುತ್ತ ಹೋಗಿ ಅವನಮುಂದೆ ಮಣಿದು ಕುಳಿತುಕೊಳ್ಳುತ್ತಿದ್ದರು. ಆಗ ನಿರ್ಮಲವಾದ ಕನ್ನಡಿ ತಪ್ಪದೆ ತನ್ನೆದುರಿದ್ದುದನ್ನು ಪ್ರತಿಬಿಂಬಿಸುವಂತೆ ಗುರುವಿನ ಬ್ರಹ್ಮಜ್ಞಾನವು ಇವರ ಶುದ್ಧಹೃದಯದಲ್ಲಿ ಸಂಪೂರ್ಣವಾಗಿಯೂ ದೋಷರಹಿತವಾಗಿಯೂ ಮೂಡುತ್ತಿತ್ತು. ಆ ಗುರುವಿನ ಕ್ರಮ

ಗುರೋಸ್ತು ಮೌನಂ ವ್ಯಾಖ್ಯಾನಂ ಶಿಷ್ಯಾಸ್ತು ಛಿನ್ನ ಸಂಶಯಾಃ ।
ಮೌನವ್ಯಾಖ್ಯಾ ಪ್ರಕಟಿತ ಪರಬ್ರಹ್ಮತತ್ವಂ ಯುವಾನಂ ॥

ಆ ಗುರುವಿನ ಮೌನವೇ ಶಿಷ್ಯರ ಎಲ್ಲ ಸಂಶಯವನ್ನೂ ನಾಶಮಾಡಿ ಪೂರ್ಣಜ್ಞಾನವನ್ನು ಸ್ಫುರಿಸುತ್ತಿತ್ತು.

ಅನಂತರದ್ದು ತ್ರೇತಾಯುಗ. ಆಕಾಲದವರು ತ್ರೇತ ಎಂಬ ಶಬ್ದ ಸೂಚಿಸುವ ಸಾಧನೆಯ ಮೂರೂ ವಿಭಾಗಗಳಾದ ಕರ್ಮ ಭಕ್ತಿ ಮತ್ತು ಜ್ಞಾನದ ದಾರಿಗಳೆಲ್ಲವುಗಳಲ್ಲೂ ಮುಂದರಿದವರಲ್ಲ; ಸಾಮಾನ್ಯವಾಗಿ ಅವಲ್ಲಿ ಒಂದರಲ್ಲಿ ಮಾತ್ರ ತಮ್ಮ ಸಾಧನೆಯನ್ನು ಯಶಸ್ವಿಯಾಗಿ ನಡೆಸಿದವರು. ಕೃತಯುಗದ ಅಧಿಕಾರಿಗಳಿಗಿಂತ ಅವರ ಚಿತ್ತದ ಪರಿಶುದ್ಧತೆಯಮಟ್ಟ ಬಹಳ ಕೆಳತರದ್ದು. ಆದ್ದರಿಂದ ಗುರುವಿನ ಬ್ರಹ್ಮಜ್ಞಾನವನ್ನು ತಾನಾಗಿಯೇ ಬಿಂಬಿಸುವ ಸ್ವಚ್ಛತೆ ಇನ್ನೂ ಪಡೆಯದ್ದು. ಆದ್ದರಿಂದ ಗುರುವಿದ್ದ ಎಡೆಗೆ ಅವರನ್ನು ತಾನಾಗಿಯೇ ಸೆಳೆಯಲಾಪ ಶಕ್ತಿ ಇಲ್ಲದ್ದು. ಆದ್ದರಿಂದ ಆ ಯುಗದ ಜ್ಞಾನಗುರುವಾದ ಶ್ರೀ ದತ್ತಾತ್ರೇಯರು ಪ್ರಥಮ ಪರಮಹಂಸ ಪರಿವ್ರಾಜಕ ಗುರುವಾಗಿ ಉತ್ತಮ ಶಿಷ್ಯರ ಉದ್ಧಾರಕ್ಕಾಗಿ ಲೋಕವನ್ನೆಲ್ಲ ಸುತ್ತುತ್ತಿರುವ ಸಂಪ್ರದಾಯದವರು.

ಅನಂತರದ್ದಾದ ದ್ವಾಪರ ಯುಗದ ಅಧಿಕಾರಿಗಳ ಮಟ್ಟ ಮತ್ತಷ್ಟೂ ಕೆಳಗಿನದ್ದು. ಗುರುವು ತನ್ನ ಬೋಧನೆಯನ್ನು ಎಷ್ಟು ಚೆನ್ನಾಗಿ ನಡೆಸಿದರೂ, ಶಿಷ್ಯನಿಗೆ ಆಗ ಅದರಿಂದ ಸಮಾಧಾನ ಉಂಟಾದರೂ, ಆ ಮೇಲೆ ದ್ವಾಪರವೆಂಬ ಶಬ್ದವೇ ಸೂಚಿಸುವಂತೆ ಪುನಃ ಪುನಃ ಸಂಶಯಗಳು ಮೂಡುತ್ತಿರುವುದೇ ಕ್ರಮ. ಆದ್ದರಿಂದ ಕೇವಲ ಒಂದುಸಾರಿಯ ವಿವರಣೆಯು ಸಾಲದಾಗಿ, ಅವನ ಸಂಶಯಗಳು ಮೂಡಿದಾಗಲೆಲ್ಲ ಅವುಗಳ ನಿವಾರಣೆಯನ್ನು ಅವನು ನಡೆಸಲಿಕ್ಕಾಗಿ, ಅವರು ಬೇಕಾದ ಎಲ್ಲ ಧಾರ್ಮಿಕ ಗ್ರಂಥಗಳನ್ನು ನಿರ್ಮಿಸುವ ಆವಶ್ಯಕತೆಯಿತ್ತು. ಆದ್ದರಿಂದಲೆ ದ್ವಾಪರದ ಈ ಆದಿ ಜಗದ್ಗುರುಗಳು ವೇದಗಳನ್ನು ವಿಂಗಡಿಸಿದರು; ವೇದಾಂತ ಸೂತ್ರಗಳನ್ನು ಬರೆದು ಉಪನಿಷತ್ತುಗಳ, ಭಿನ್ನತರದವೆಂದು ತೋರುವ, ತಾತ್ವಿಕ ಪ್ರತಿಪಾದನೆಗಳಲ್ಲಿನ ಆಳವಾದ ಹೊಂದಿಕೆಯನ್ನು ವ್ಯಕ್ತಪಡಿಸಿದರು. ವೇದಾರ್ಥವನ್ನು ವೇದಗಳಿಂದ ಕಲಿತುಕೊಳ್ಳಲು ಅಧಿಕಾರವಿಲ್ಲದವರಿಗೆ ಅಥವಾ ಅವುಗಳ ಅರ್ಥ ಗ್ರಹಿಸಲು ಕಷ್ಟವಾದವರಿಗೆ ಸಹಾಯಕ್ಕಾಗಿ ಪುರಾಣಗಳನ್ನೂ ಮಹಾಭಾರತವನ್ನು ಬರೆದರು.

ಆದರೆ ದ್ವಾಪರಯುಗದವರಿಗೆ ಶಾಸ್ತ್ರಗಳ ಅರ್ಥಮಾತ್ರ ಸ್ಪಷ್ಟವಾಗದಿದ್ದದ್ದರೆ, ಕಲಿಯುಗದಲ್ಲಿ, ಅದರ ಅತಿಕೆಟ್ಟ ಹೆಸರೇ ಸೂಚಿಸುವಂತೆ, ಶಾಸ್ತ್ರಗಳ ಬಗ್ಗೆ ಅಶ್ರದ್ಧೆ, ತಪ್ಪು ಭಾವನೆ, ವಿರುದ್ಧ ಭಾವನೆ, ಮುಂತಾದವುಗಳೇ ಕ್ರಮವಾಗುತ್ತವೆ. ತೀರಾ ಅಯೋಗ್ಯರೂ ತಾವೇ ಗುರುಗಳೆಂದು ಮುಂದೆ ಬರುವುದುಂಟು. ಆದ್ದರಿಂದ ಈ ಕಾಲಕ್ಕೆ ಬೇಕಾದುದು ಶಾಸ್ತ್ರಗ್ರಂಥಗಳ ಅತ್ಯಂತ ವಿಸ್ತಾರವಾದ ಭಾಷ್ಯಗಳು

ಮತ್ತು ಅವನ್ನು ಬರೆಯುವ ಕ್ರಮವೂ ಈ ಕಾಲದ ತಾರ್ಕಿಕ ಬಾಧೆಗೆ ತಕ್ಕಂತೆ ಯಿರಬೇಕು. ವಾದಗಳರೂಪದ. ಪೂರ್ವ ಪಕ್ಷದ ನಿರೂಪಣೆ, ಅನಂತರ ಅದರ ಅತ್ಯಂತ ಸಮರ್ಥತೆಯ ಖಂಡನೆ, ಆ ಮೇಲೆ ನಿಜವಾದ ಅರ್ಥದ ಅತ್ಯಂತ ತರ್ಕ ಬದ್ಧ ಪ್ರತಿಪಾದನೆ ಇದು ಮಾತ್ರವೇ ಅತ್ಯುತ್ತಮದಾರಿಯಾದೀತು. ಈ ತರದ ಅತ್ಯಂತ ಬುದ್ಧಿಚುರುಕುತನದ ಪ್ರತಿಪಾದನಾ ಕ್ರಮದ ಭಾಷ್ಯಗಳ ದಾರಿಯನ್ನು ಶ್ರೀ ಶಂಕರಾಚಾರ್ಯರು ಆರಿಸಿದ್ದನ್ನೇ ಇತರ ಆಚಾರ್ಯರೂ ಆ ಮೇಲೆ ಅನು ಸರಿಸಿದ್ದಾರೆ.

ಶ್ರೀ ಶಂಕರಾಚಾರ್ಯರು ಕೇವಲ ಹಲವು ಆಚಾರ್ಯರುಗಳಲ್ಲಿ ಒಬ್ಬರಲ್ಲ ಯುಗದ ಏಕಮಾತ್ರ ಆದಿ ಜ್ಞಾನಗುರುವಾದ್ದರಿಂದಲೇ ಪುರಾಣಗಳೂ ಅವರು ಕಲಿಯುಗದಲ್ಲಿ ಅವತರಿಸುವ ವಿಚಾರವನ್ನು ಹಲವು ಕಡೆಗಳಲ್ಲಿ, ಸ್ವಲ್ಪ ವಿಸ್ತಾರವಾಗಿಯೇ ಮತ್ತು ಕೆಲವುಕಡೆಗಳಲ್ಲಿ ಅವರ ನಾಲ್ಕು ಶಿಷ್ಯರ ಹೆಸರನ್ನೂ ಸೇರಿಸಿಯೇ ತಿಳಿಸಿವೆ. ಅವಲ್ಲಿ ಕೆಲವನ್ನು ಈ ಕೆಳಗೆ ಕೊಟ್ಟಿದೆ.

ನಿನ್ದನ್ತಿ ವೇದವಿದ್ಯಾಂ ಚದ್ವಿಜಾಃ ಕರ್ಮಾಣಿ ವೈ ಕಲೌ ।
ಕಲೌ ರುದ್ರೋ ಮಹಾದೇವಃ ಶಂಕರೋ ನೀಲ ಲೋಹಿತಃ ।
ಪ್ರಕಾಶತೇ ಪ್ರತಿಷ್ಠಾರ್ಥಂ ಧರ್ಮಸ್ಯ ವಿಕೃತಾಕೃತೇಃ ।
ಯೇತಂ ವಿಪ್ರಾ ನಿಷೇವನ್ತೇ ಯೇನ ಕೇನಾಪಿ ಶಂಕರಂ ।
ಕಲಿ ದೋಷಾನ್ ವಿನಿರ್ಜಿತ್ಯ ಪ್ರಯಾನ್ತಿ ಪರಮಂ ಪದಂ ॥

— ಲಿಂಗಪುರಾಣ ಅಧ್ಯಾಯ 40, 20, 21, 22

ಕಲೌ ರುದ್ರೋ ಮಹಾದೇವೋ ಲೋಕಾನಾಮೀಶ್ವರಃ ಪರಃ ।
ತದೇವ ಸಾಧಯನ್ನೄಣಾಂ ದೇವತಾನಾಂಚ ದೈವತಂ ।
ಕರಿಷ್ಯತ್ಯವತಾರಂ ಸ್ವಂ ಶಂಕರೋ ನೀಲಲೋಹಿತಃ ।
ಶ್ರೌತ ಸ್ಮಾರ್ತ ಪ್ರತಿಷ್ಠಾರ್ಥೇ ಭಕ್ತಾನಾಂ ಹಿತಕಾಮ್ಯಯಾ ॥

ಉಪದೇಕ್ಷ್ಯತಿ ತಜ್ಞಾನಂ ಶಿಷ್ಯಾಣಾಂ ಬ್ರಹ್ಮ ಸಂಮಿತಂ ।
ಸರ್ವ ವೇದಾಂತ ಸಾರಂಹಿ ಧರ್ಮಾನ್ ವೇದಾಂತ ದರ್ಶನಾತ್ ॥
ಯೇತಂ ಪ್ರೀತ್ಯಾ ನಿಷೇವಂತೇ ಯೇನಕೇನೋಪಚಾರತಃ ।
ವಿಜಿತ್ಯ ಕಲಿಜಾನ್ ದೋಷಾನ್ ಯಾನ್ತಿ ತೇಪರಮಂ ಪದಂ ॥

— ಕೂರ್ಮ ಪುರಾಣ ಅ 30-32 ರಿಂದ 35

ಚತುರ್ಭಿಃ ಸಹ ಶಿಷ್ಯೈಸ್ತು ಶಂಕರೋಽವ ತರಿಷ್ಯತಿ ॥

—ವಾಯು ಪುರಾಣ

ಚತುರ್ಭಿಃ ಸಹ ಶಿಷ್ಯೈಸ್ತು ಶಙ್ಕರೋಽವ ತರಿಷ್ಯತಿ ।
ವ್ಯಾಕುರ್ವನ್ ವ್ಯಾಸಸೂತ್ರಾಣಿ ಶ್ರುತೇರರ್ಥಂ ಯಥೋದಿತಂ ।
ಸಏವಾರ್ಥಃ ಶ್ರುತೇಗ್ರಾ್ರಹ್ಯಃ ಶಂಕರ ಪ್ರದಿಪಾದಿತಃ ॥

—ಸೌರಪುರಾಣ

ಕಲ್ಯಾದೌ ದ್ವಿಸಹಸ್ರಾಂತೇ ಲೋಕಾನುಗ್ರಹ ಕಾಮ್ಯಯಾ ।
ಚತುರ್ಭಿಃ ಸಹಶಿಷ್ಯೈಸ್ತು ಶಂಕರೋಽವ ತರಿಷ್ಯತಿ ॥

— ಭವಿಷ್ಯೋತ್ತರ ಪುರಾಣ 36 ನೇ ಅಧ್ಯಾಯ

ಪ್ರಾಮಾಣಿಕಃ ಶ್ರುತ್ಯುದಿತಸ್ಸಯೋಽರ್ಥೋ ವ್ಯಾಸೋಕ್ತ ರೀತ್ಯಾ ಪ್ರತಿಪಾದಿತಶ್ಚ ।
ವ್ಯಾಸೋದಿತಂ ಶಂಕರ ಬೋಧಿತಂ ತದ್ಯಃ ಶಂಕರೋಽಸೌ ಸವಿತಾಸ ಈಶಃ ॥

— ಸ್ಕಾಂದೇ ಬದರೀ ಮಾಹಾತ್ಮ್ಯೇ

ತತೋಽಹಂ ಯತಿ ರೂಪೇಣ ತೀರ್ಥಾನ್ನಾರದ ಸಂಜ್ಞಕಾತ್ । ಉದ್ಧೃತ್ಯ ಸ್ಥಾಪಯಿಷ್ಯಾಮಿ ಮೂರ್ತಿಂ ಲೋಕ ಹಿತೇಚ್ಛಯಾ । — ಶಿವಪುರಾಣೇ ಕಾಳೀ ಖಂಡೇ

ಕೃತೇ ಜ್ಞಾನ ಪ್ರದಸ್ಸತ್ಯಸ್ತ್ರೇತಾಯಾಂ ದತ್ತ ಏವಚ । ದ್ವಾಪರೇ ವ್ಯಾಸನಾಮಾತು ಕಲೌ ಶಂಕರ ಈರಿತಃ । ಸತ್ಯಃ ಸುಮೇಧಸೋ ಬ್ರಹ್ಮಾ ಪುತ್ರ ಭಾವಮುಪಾಗತಃ । ಅತ್ರೇರ್ದತ್ತಃ ಶಕ್ತಿ ಪುತ್ರ ಸುತೋ ವ್ಯಾಸಃ ಪ್ರಕೀರ್ತಿತಃ । ಶಿವ ತೇಜಃ ಸುತಸ್ಸಾಕ್ಷಾತ್ ಶಂಕರಃ ಪರ ದೈವತಂ । ಮುಹುರ್ಮುಹುಃ ಪ್ರಣಷ್ಟಸ್ಯ ಶಾಸ್ತ್ರಸ್ಯೋದ್ಧರಣಾಯ ವೈ । ಶ್ರುತಿ ಸ್ಮೃತ್ಯರ್ಥ ಬೋಧಾಯ ಪಾಸಂಢ ನಿಧನಾಯ ಚ । ಅಧ್ಯಾತ್ಮ ಶಾಸ್ತ್ರ ವಿಜ್ಞಪ್ತ್ಯೈ ಲೋಕಾನುಗ್ರಹ ಕಾರಣಾತ್ । ಸುರಾದ್ಯಭ್ಯರ್ಥಿತೋ ದೇವ ದೇವೋಽಸೌ ಭಗವಾನ್ ಶಿವಃ । ಅವತಾರಾಂಶ್ಚಕಾರಾತ್ರ ಶ್ರುತಿ ಸ್ಮೃತಿ ವಿಭಾಗಕೃತ್ — ಇತಿ ॥

ಎಷ್ಟೋ ಧರ್ಮಗಳ ಪ್ರತಿಪಾದನೆಗಳು ವಿಜ್ಞಾನದ ಶೋಧನೆಗಳಿಗೆ ವಿರುದ್ಧವಾದವುಗಳೆಂದು ಕಂಡಾಗ, ಜನರ ನಂಬಿಕೆ ಕಳಕೊಂಡವಾಗಿವೆ. ಆದರೆ ವಿಜ್ಞಾನದ ಅತ್ಯದ್ಭುತ ಶೋಧನೆಗಳೂ ಅದ್ವೈತ ವೇದಾಂತಕ್ಕೆ ಸಮರ್ಥನೆ ಕೊಟ್ಟವಿಯೋ ಹೊರತು ಅಲ್ಲಗಳೆದದ್ದಿಲ್ಲ. ಆದ್ದರಿಂದ ಮುಂದೆಯೂ ಹೀಗೆಯೇ ನಡೆದು, ಅದರ ಸತ್ಯತೆಯು ಮಾತ್ರವೇ ಯುಗಾಂತರದ ವರೆಗೂ ಸ್ಥಿರವಾಗಿ ನಿಂತೀತು ಎಂಬ ಭರವಸೆಯಿದೆ. ಹೀಗೆ ಇಡೀ ಯುಗಕ್ಕೆ ಒಬ್ಬ ಜ್ಞಾನಾಚಾರ್ಯರಾದವರು ಶ್ರೀ ಶಂಕರಾಚಾರ್ಯರು ಆದ್ದರಿಂದ ಇಡೀ ದೇಶದ ಎಲ್ಲ ಜನರ ಮಾನ್ಯತೆಗೂ ಕೃತಜ್ಞತೆಗೂ ಅರ್ಹರಾದವರಾಗಿದ್ದಾರೆ. ಅವರನ್ನು ವಲ್ಲಿಸುವ ಭಾಗ್ಯ, ಉದಾರತೆ, ನಮ್ಮೆಲ್ಲರಲ್ಲೂ ಉಂಟಾಗುವಂತಾಗಲಿ !

—

## ೬. ನಮ್ಮ ಧರ್ಮದ ಶೋಚನೀಯ ಪರಿಸ್ಥಿತಿ.

ನಮ್ಮ ಧರ್ಮದ ಪರಿಸ್ಥಿತಿಯು ಈಗ ತೀರಾ ಶೋಚನೀಯವಾಗಿದೆ. ನಮವರೇ ರಾಜ್ಯ ಆಳುತ್ತಿದ್ದರೂ ಅವರು ಬಹುಮಟ್ಟಿಗೆ ನಮ್ಮ ಧರ್ಮವನ್ನು ಕಲಿತವರಲ್ಲ, ಅದರಲ್ಲಿ ಶ್ರದ್ಧೆ ಇದ್ದವರಲ್ಲ, ಅದರ ಅಭ್ಯಾಸ ನಡೆಸುತ್ತಿದ್ದವರಲ್ಲ. ಅವರು ರಚಿಸಿದ ರಾಜ್ಯಕ್ರಮವು ಧರ್ಮವು ಬೇಡವಾದ, ದೇವರು ಅನಗತ್ಯವೆನ್ನುವ, ತರದ್ದು. ದೇಶದ ಹಿಂದೂ ಮಕ್ಕಳಿಗೆ ದೇವರು ಬೇಕು, ಧರ್ಮಾಚರಣೆ ಬೇಕು, ಎಂದು ಬೋಧಿಸುವ ಯೋಗ್ಯತೆ ನಮ್ಮ ರಾಜಕೀಯ ಮುಖಂಡರಲ್ಲಿ ಸ್ವಲ್ಪವೂ ಇಲ್ಲ. ಆದರೆ ಹಿಂದೂ ಧರ್ಮದ ತಳಹದಿಯಾದ ವರ್ಣಧರ್ಮವು ನಾಶವಾಗಬೇಕು ಎಂದು ಅವರು ನಿರಂತರವಾಗಿ ಸಾರುತ್ತಿದ್ದಾರೆ. ಆದರೆ ಚಿಕ್ಕಪ್ರಾಯದವರಿಗೆ ಧರ್ಮದ ಅಭ್ಯಾಸಕ್ಕಿರುವುದೇ ಅವರ ಜಾತಿಯ ಕೆಲವು ಆಚರಣೆಗಳು; ಮತ್ತು ಕುಲಾಚಾರಗಳು. ಅವನ್ನು ಬಿಟ್ಟರೆ ಅವರಲ್ಲಿ ಉಂಟಾಗುವ ಧಾರ್ಮಿಕ ಜೀವನದ ಶೂನ್ಯತೆ ತುಂಬಿಸಲಿಕ್ಕೆ ಬೇರೆ ಯಾವ ಧಾರ್ಮಿಕಬೋಧನೆ ಕೊಡುವ ಸಮರ್ಥತೆಯೂ ನಮ್ಮ ರಾಜಕೀಯ ಮುಖಂಡರಿಗಿಲ್ಲ. ಆದ್ದರಿಂದ ಅನೇಕಾನೇಕ ಹಿಂದೂ ಮಕ್ಕಳು ಈಗ ಧರ್ಮ ಬೇಡವಾದ ನಾಸ್ತಿಕರಾಗಿ ಬೆಳೆಯುತ್ತಿದ್ದಾರೆ. ಕ್ರಿಶ್ಚನ ಯುವಕರಿಗೆ, ಮುಸುಲ್ಮಾನ ಯುವಕರಿಗೆ ಅವರವರ ಕೆಲವುತರದ ಧರ್ಮಾಚಾರಗಳಾದರೂ ಇದ್ದು, ಅವರ ಧರ್ಮ ಪ್ರಿಯತೆ ಸಜೀವವಾಗಿ ಉಳಿದಿರುವುದನ್ನು ಕಾಣುತ್ತೇವೆ. ಆದರೆ ಹಿಂದೂ ಯುವಕರಲ್ಲಿ ತಮ್ಮ ಧರ್ಮದ ಬಗ್ಗೆ ಯಾವ ಅಭಿಮಾನವೂ ಇಲ್ಲದಂತಾಗುತ್ತಿರುವುದು ಎಂಥ ಭಯಂಕರ ಪರಿಸ್ಥಿತಿ!

ನಮ್ಮ ರಾಜಕೀಯ ಮುಖಂಡರಿಗೆ ಈಗ ಬೇಕಾದುದು ದೇವರ ಸಹಾಯವಲ್ಲ ಕೇವಲ ವಿಜ್ಞಾನದ ಸಹಾಯಮಾತ್ರ ಅವು ಈಗ ಅತ್ಯಂತ ಸಾಮಾನ್ಯವಾಗಿ ಕೆಲಸ ಮಾಡುವ ರೀತಿಯು ಧರ್ಮಕ್ಕೆ ತೀರಾ ವಿರುದ್ಧತರದ್ದು. ಧರ್ಮದ ಏಕಮಾತ್ರ ಗುರಿ ಇರುವುದು ದೇಹದ ಬಂಧನ ಗೆಲುವ ಸಮರ್ಥತೆ ಬೆಳೆಸಲಿಕ್ಕೆ; ಅದಕ್ಕಾಗಿ ಸ್ವಾರ್ಥ ಗೆಲುವ, ಶೀಲ ಬೆಳಸುವ, ತರಬೇತಿ ಕೊಡಲಿಕ್ಕೆ ವಿಜ್ಞಾನದ ತೀರಾ ಸಾಮಾನ್ಯ ಉಪಯೋಗವೆಂದರೆ ಜನರಮುಂದೆ ಅಪರಿಮಿತ ಸುಖೋಪ ಭೋಗಗಳನ್ನು ಸುರಿದು, ದೇಹದ ಸುಖದಲ್ಲಿ, ಇಂದ್ರಿಯಚಪಲತೆ ಕೆದರುವ ಅನುಕೂಲತೆಗಳಲ್ಲಿ, ಮನಸ್ಸಿನ ಉದ್ವೇಗ ಹೆಚ್ಚಿಸುವ ಆಟದಲ್ಲಿ ಮುಳುಗುವಂತೆ ಮಾಡುವುದು. ಅದರಿಂದಾಗಿ ಜನರಲ್ಲಿ ಸ್ವಾರ್ಥಪರತೆ, ಕಾಮುಕತೆ, ವಂಚನೆ, ಲಂಚಕೋರತನ, ಅಶ್ಲೀಲತೆ ಮುಂತಾದವು ಭೂಲೋಕದಲ್ಲೆಲ್ಲ ತುಂಬಾ ಹೆಚ್ಚುತ್ತಿದೆ. ನಮ್ಮ ದೇಶವೂ ಈಗ ಇದಕ್ಕೆ ಹೆಚ್ಚು ಹೆಚ್ಚಾಗಿ ಬಲಿಬೀಳಲಾರಂಭಿಸಿದೆ. ವಿಜ್ಞಾನದ ಉಪಯೋಗವು ಆರ್ಥಿಕ ಕಷ್ಟಗಳ ಪರಿಹಾರಕ್ಕೆ ಬೇಕು ಆದರೆ ಇಂದ್ರಿಯ ಚಪಲತೆ, ಸ್ವಾರ್ಥಪರತೆ ಹೆಚ್ಚಿಸಲಿಕ್ಕಲ್ಲ ಅದರ ಪ್ರಯೋಜನಮಾತ್ರ ಹೊಂದಿ ಅದರ ಧರ್ಮನಾಶಕ ಭಾಗವನ್ನು

ತಡೆಗಟ್ಟುವ ಸಮರ್ಥತೆ ಧರ್ಮ ಬೇಡವಾದ ನಮ್ಮ ಸರಕಾರಕ್ಕೆ ಈ ಏನೇನೂ ಇಲ್ಲ. ಆದ್ದರಿಂದ ಎಲ್ಲಿ ಕಂಡರೂ ಧರ್ಮದ ತಾತ್ಸಾರವೆಂಬ ವಿಪರೀತ ಹಾನಿಕರದ ಸ್ಥಿತಿ ಬೆಳೆಯುತ್ತಿದೆ

ನಮ್ಮ ಈ ರಾಜಕೀಯ ಪ್ರತಿನಿಧಿಗಳು ನಮ್ಮ ಧರ್ಮದ ವಿಭಾಗಕ್ಕು ಕೈ ಹಾಕುತ್ತಿದ್ದಾರೆ. ಅದಕ್ಕೆ ಅವರಲ್ಲಿ ರವಷ್ಟೂ ಯೋಗ್ಯತೆ ಇಲ್ಲ. ಏಕೆಂದರೆ ಅವರಿಗೆ ನಮ್ಮ ಧರ್ಮದಲ್ಲಿ ಅಭಿಮಾನವಾಗಲಿ ಅದರ ಅಭ್ಯಾಸದಿಂದ ಬರುವ ಸರಿಯಾದ ಜ್ಞಾನವಾಗಲಿ ಏನೇನೂ ಇಲ್ಲ ಅವರಿಂದ ನಡೆಯುವ ನಮ್ಮ ಧರ್ಮದ ಸುಧಾರಣೆಗಳ ಕಾರ್ಯವೆಂದರೆ, ಬಲ್ಲವರು ಮಾಡಿಟ್ಟ ಅಡಿಗೆ ರುಚಿಸಾಲದೆಂದು ಅಡಿಗೆ ಮಾಡಲು ತಿಳಿಯದವರು ಏನೇನೋಮಾಡಿ ಕೆಡಿಸಿದಂತೆ ಈ ರಾಜಕೀಯ ಸುಧಾರಕರು ಕ್ರಿಶ್ಚನ್ ಧರ್ಮದಲ್ಲಿ ಮುಸುಲ್ಮಾನ ಧರ್ಮದಲ್ಲಿ ಕೈ ಹಾಕಲು ಧೈರ್ಯವಿಲ್ಲದ ಹೇಡಿಗಳು ಏಕೆಂದರೆ ಆ ಧರ್ಮಗಳು ತಮ್ಮ ರಕ್ಷಣೆಗೆ ಬೇಕಾದ ಧಾರಾಳಶಕ್ತಿ ಇರುವವು. ಆದರೆ ಹಿಂದೂ ಧರ್ಮವು ವಿಪರೀತವಾಗಿ ಕವಲೊಡದಿದ್ದು ವಿಪರೀತ ಒಳಭಿನ್ನತೆ ಬೆಳೆಸಿದ್ದು, ತನ್ನ ರಕ್ಷಣಾಶಕ್ತಿ ಏನೂ ಇಲ್ಲದಾಗಿದ್ದು, ಈ ರಾಜಕೀಯ ಮುಖಂಡರ ತೀರಾ ಹಾನಿಕರವಾದ ವರ್ತನೆಯನ್ನು ಎದುರಿಸಲಾರದ್ದಾಗಿದೆ. ಆದ್ದರಿಂದ ಈಗ ಇಡೀ ಹಿಂದೂ ಸಮಾಜವು ಕೇವಲ ನಿಶ್ಯಕ್ತವಾಗಿ ಕುಳಿತು ಕಣ್ಣು ಬಿಡುತ್ತಿರುವ ಶೋಚನೀಯಸ್ಥಿತಿಯಲ್ಲಿದೆ. ಸಂಘಟನಾಶಕ್ತಿ ಪುನಃ ಬೆಳೆಸದೆ ಅದು ತನ್ನ ರಕ್ಷಣಾ ಸಮರ್ಥತೆ ಬೆಳೆಸಲಾರದು. ಆದರೆ ಆ ಸಂಘಟನಾ ಶಕ್ತಿಯನ್ನು ಅದು ಈಗ ಬೆಳೆಸುವ ಯಾವ ಲಕ್ಷಣವೂ, ಶುಭಸೂಚನೆಯೂ ತೋರಿಸಲಾರದ ತುಂಬಾ ವ್ಯಥೆ ಪಡಬೇಕಾದ ಸ್ಥಿತಿಯಲ್ಲಿದೆ.

ನಮ್ಮ ಅತ್ಯಂತ ಪವಿತ್ರವಾದ ಧರ್ಮಕ್ಕೆ ಈ ಅತಿ ಶೋಚನೀಯ ಸ್ಥಿತಿ ಹೇಗೆ ಉಂಟಾಯಿತು ? ಕಳೆದ 1000 ವರ್ಷಗಳ ಅತಿ ದೀರ್ಘಕಾಲದಲ್ಲೆಲ್ಲ ನಮ್ಮ ಧರ್ಮದಲ್ಲಿ ನಡೆದದ್ದು ಈ ಒಳ ವಿಭಾಗಗಳು ಮಾತ್ರ. ನಮ್ಮ ಧರ್ಮದ ಉದ್ಧಾರಕ್ಕೆಂದು ಬಂದ ಆಚಾರ್ಯರು ಅದಕ್ಕೆ ಭಕ್ತಿ ಪಂಥದ ಭದ್ರತೆ ದಯಪಾಲಿಸಿದರು, ಸರಿ. ಆದರೆ ತಮ್ಮ ತಮ್ಮ ಪಂಥದ ಧರ್ಮ ಪ್ರಚಾರದ ಉದ್ವೇಗದಲ್ಲಿ, ಸನಾತನ ಧರ್ಮವು ಅಪಾರ ಮಟ್ಟದಲ್ಲಿ ತುಂಡುತುಂಡಾದರೆ ಅದು ಸಂಪೂರ್ಣ ಬಲಹೀನವಾದರೆ ಅದರ ಗತಿ ತೀರಾ ಅಭದ್ರವಾಗದೇ, ಎಂಬ ಪ್ರಶ್ನೆಗೆ ರವಷ್ಟೂ ಲಕ್ಷಕೊಟ್ಟಂತೆ ಕೋರುವುದಿಲ್ಲ. ವಿಷ್ಣುವಿನ ಅದ್ವಿತೀಯತೆ ಸ್ಥಾಪಿಸಿದವರು ಶಿವನ ತಾತ್ಸಾರವನ್ನೂ ಧಾರಾಳವಾಗಿ ನಡೆಸಿದರು ಶಿವನಿಗೆ ಸಮಾನ ದೇವರಿಲ್ಲ ಎಂದು ಪ್ರತಿಪಾದಿಸಿದವರು ವಿಷ್ಣುವಿನ ಹೆಸರೇ ಕೇಳಲು ಬಯಸದವರಾದರು. ವೈಷ್ಣವ ಪಂಥದಲ್ಲೇ ಕೆಲವರು ಕೃಷ್ಣನ ಹೊಗಳುವಿಕೆಯಲ್ಲಿ ಅವನು ಮಾತ್ರವೇ ಪೂರ್ಣ ಅವತಾರ, ರಾಮ ಹಾಗಲ್ಲ

ಎಂದರು. ಆ ಮೇಲೆ ಕೆಲವು ಆಚಾರ್ಯರು ಕೃಷ್ಣನಲ್ಲಿಕೂಡ, ಅವನು ಮಥುರೆಗೆ ಹೋಗುವ ವರೆಗೆಮಾತ್ರ ಅವನಲ್ಲಿ ಪರಿಪೂರ್ಣ ಅವತಾರ ಕಂಡರು, ಆ ಮೇಲಿನ ಕೃಷ್ಣನೇ ಬೇರೆ ಎಂದರು. ಅವರಿಗೆ ರಾಧಾಕೃಷ್ಣಮಾತ್ರ ಅತ್ಯಂತ ಮುಖ್ಯಸಾದರೆ, ಉಳಿದವರಿಗೆ ರುಕ್ಮಿಣೀ ಕೃಷ್ಣನೇ ಬೇಕಾಯಿತು. ಎಷ್ಟೆಲ್ಲ ತಂಡಗಳು !

ತಾನು ನಿಜವಾದ ದೇವರು ಎಂದು ಎಣಿಸುವ ಅಲ್ಲಾದೇವರು ಮಾತ್ರವೇ ಜನ ರಿಂದ ಪ್ರಾರ್ಥಿಸಲ್ಪಡಬೇಕು, ಇತರ ದೇವರುಗಳಲ್ಲ, ಎಂದು ಭಾವಿಸಿದ ಟಿಪ್ಪೂಸು ಲ್ತಾನನು ಮಂಗಳೂರಿನ ಕೆಲವು ದೇವಸ್ಥಾನಗಳನ್ನು ಮಸೀದಿಗಾಗಿ ಮತಾಂತರಿಸಿ ದನು. ತಮ್ಮ ಇಷ್ಟದೇವರು ಮಾತ್ರ ಇತರರ ಇಷ್ಟ ದೇವರೂ ಆಗಲೇಬೇಕೆಂದು ತಮ್ಮ ಆಧೀನಕ್ಕೆ ಬಂದ ದೇವಸ್ಥಾನಗಳ ದೇವರ ಮೂರ್ತಿಯನ್ನು ಮತಾಂತರ ನಡೆ ಸಿದ ಆಚಾರ್ಯರೂ ಇದ್ದಾರೆ!

ತಿರುಪತಿಯು ಬಹಳಕಾಲ ದೇವಿಯ ಕ್ಷೇತ್ರವೆಂದೂ ಸ್ವಲ್ಪಕಾಲ ಸುಬ್ರಮ್ಹಣ್ಯ ಕ್ಷೇತ್ರವೆಂದೂ ಖ್ಯಾತಿಗೊಂಡಿತ್ತು. ಅಲ್ಲಿನ ದೇವರಮೂರ್ತಿಯು ಯಾವ ಭಾವದಿಂದ ಭಕ್ತರು ಬರುತ್ತಾರೋ ಅವರ ಆ ಭಾವಕ್ಕೆ ವಲಿಯುವ ತರದ್ದು. ಶ್ರೀ ಶಂಕರಾ ಚಾರ್ಯರು ಆ ಕ್ಷೇತ್ರದ ಅಪಾರಮಹಿಮೆ ಕಂಡು, ಅಲ್ಲಿಗೆ ಯಾತ್ರಿಕರು ಅತಿ ಧಾರಾ ಳವಾಗಿ ಆಕರ್ಷಿಸಲ್ಪಡಲಿ ಎಂದು ಒಂದು ಆಕರ್ಷಣಾ ಚಕ್ರವನ್ನು ಅಲ್ಲಿ ಸ್ಥಾಪಿಸಿ ದ್ದರು. ಮತ್ತು ದೇವಿಯ ಮೂರ್ತಿಯೊಡನೆ ಉಪಾಸನೆಗೆಂದು ಶಿವಲಿಂಗವನ್ನು ಅಲ್ಲಿ ಪ್ರತಿಷ್ಠೆ ಮಾಡಿದರು ಅಂದಿನಿಂದ ಆ ಕ್ಷೇತ್ರವು ವೆಂಕಟೇಶ್ವರನೆಂದು ಖ್ಯಾತ ವಾಯಿತು. ಆದರೆ ಶ್ರೀರಾಮಾನುಜಾಚಾರ್ಯರು ಮೂಲ ವಿಗ್ರಹವನ್ನು ವಿಷ್ಣುವಾಗಿ ಮತಾಂತರಿಸಲಿಕ್ಕೆ ಕೈಗಳಿಗೆ ಚಿನ್ನದ ಶಂಖ ಚಕ್ರ ಸಿಕ್ಕಿಸಿದರು. ಹಣೆಗೆ ಅತಿ ದೊಡ್ಡ ನಾಮ ಹಾಕಿದರು. ದೇವರನ್ನೇ ಮತಾಂತರಿಸಿದರು! ಈಗ ಊಹಿಸಬಹುದಾದಂತೆ ಶಿವಲಿಂಗದ ಚಿಹ್ನೆ ಅಡಗಿಸಲಿಕ್ಕೆ ಗರ್ಭಗುಡಿಯ ನೆಲವೇ ಏರಿಸಲ್ಪಟ್ಟು ಮೂಲ ವಿಗ್ರಹದ ದೊಡ್ಡ ಪೀಠ ಬಹುಮಟ್ಟಿಗೆ ಮುಚ್ಚಲ್ಪಟ್ಟು ಈಗ ವಿಗ್ರಹದ ಅಳತೆಗೆ ಹೊಂದಿಕೆಯಿಲ್ಲದ ಚಿಕ್ಕ ಪೀಠಮಾತ್ರ ತೋರುವಂತಾಗಿದೆ. ಮುಂಚಿನ ಕೆಳತಳದ ಲ್ಲಿದ್ದ ಅಭಿಷೇಕದ ನೀರಿನದ್ವಾರ ಬಂದಾಗಿ ಈಗ ಈ ನೀರುಹೋಗಲು ಸರಿಯಾದ ಆಸ್ಪದವಿಲ್ಲದಾಗಿದೆ ವಿಷ್ಣುವಿನ ಎಡ ಎದೆಯಮೇಲಿರಬೇಕಾದ ಶ್ರೀವತ್ಸವವು ಈ ಮೂರ್ತಿಗೆ ಅಲ್ಲಿ ಕೆತ್ತಲಿಕ್ಕೆ ಎಡೆ ಯಿಲ್ಲದ್ದರಿಂದ ಬಲಭಾಗದಲ್ಲಿ ಅವಸರದಲ್ಲಿ ಕೆತ್ತಿ ದಂತಿದೆ.

ಆದರೆ ಈ ಮತಾಂತರದ ಅನಂತರವೂ ಮೂಲ ಮೂರ್ತಿಯ ಚಿಹ್ನೆಗಳು ಕೆಲವು ಉಳಿದಿವೆ. ಕೆಲವು ಆಚರಣೆಗಳೂ ಉಳಿದಿವೆ. ದೇವರ ಕೈಗಳಲ್ಲಿ ನಾಗಾಭರಣಗಳಿವೆ ಜಡೆಯಲ್ಲಿ ಶ್ರೀಚಕ್ರವಿದೆ, ಗರ್ಭಗುಡಿಯ ಮೇಲೆ ಮಾಡಿನ ಮೂಲೆಗಳಲ್ಲಿ ದೇವಿಯ

ವಾಹನವಾದ ಸಿಂಹದ ವಿಗ್ರಹಗಳಿವೆ. (8 ವರ್ಷಗಳ ಹಿಂದೆ ನಾನು ಕಂಡಾಗಲೂ) ದೇವರ ಅಭಿಷೇಕ ಈಗಲೂ ದೇವಿಗೆ ಪ್ರಿಯವಾದ ಶುಕ್ರವಾರ ಅರಸಿನದ ನೀರಿಂದ ನಡೆಯುತ್ತದೆ. ವರ್ಷಕ್ಕೊಂದು ತಿಂಗಳು ಬಿಲ್ವಾರ್ಚನೆ ನಡೆಯುತ್ತದೆ. ದೇವಸ್ಥಾನದ ಬ್ರಹ್ಮೋತ್ಸವ ದೇವಿಗೆ ಅತ್ಯಂತ ಪ್ರಿಯವಾದ ನವರಾತ್ರಿಯಲ್ಲಿ ನಡೆಯುತ್ತದೆ ದೇವರ ಆಭರಣಗಳ ಪೂಜೆ ಮುಂತಾದವು ಬಹಳ ಗುಟ್ಟಿಂದ ನಡೆಯುತ್ತವೆ, ಸ್ವಾಮಿ ರಾಮಕೃಷ್ಣ ಪರಮಹಂಸರ ಅತಿ ಮುಖ್ಯ ಶಿಷ್ಯರಾದ ಸ್ವಾಮಿ ಬ್ರಹ್ಮಾನಂದರಿಗೆ ಯಾವ ಶಕ್ತಿಯುಕ್ತ ದೇವಸ್ಥಾದದಲ್ಲೂ ಅಲ್ಲಿನ ದೇವರು ಪ್ರತ್ಯಕ್ಷವಾಗುತ್ತಿತ್ತು, ಅವರು ತಿರುಪತಿಯಲ್ಲಿದ್ದ ಏಳುದಿನಗಳಲ್ಲೂ ಅವರು ಕಾಣುತ್ತಿದ್ದುದು ದೇವಿಯನ್ನು ಮಾತ್ರವಂತೆ! .

ಉತ್ತರ ಆರ್ಕಾಟು ಜಿಲ್ಲೆಯ ಮೆನ್ಸ್ ಆಲೀ (1880) ಬರೆದ ಕೋಕ್ಸರು, ಈ ದೇವಸ್ಥಾನವು ಶ್ರೀ ರಾಮಾನುಜರ ಕಾಲದವರೆಗೆ ಶಿವದೇವಸ್ಥಾನವಾಗಿತ್ತೆಂಬ ಬಗ್ಗೆ ಯಾರವಾದವೂ ಇಲ್ಲ ಎಂದು ಬರೆದಿದ್ದಾರೆ. ಅಲ್ಲಿಯ ಅರ್ಚಕರು ಮೂಲಥ ಶೈವರು ಎಂದು ಬರೆದಿದ್ದಾರೆ. ಕೋರ್ಟು ವ್ಯವಹರಣೆಗಳಲ್ಲಿ ಕೋರ್ಟು ಒಪ್ಪಿದ ಕಂಪೆನಿ ಸರಕಾರದ ದಾಖಲೆಯಾದ ಸವಾಲ್ ಎ ಜವಾಬಲ್ಲೂ, ಲಂಡನ್ನಿನ ಒಂದು ಸರಕಾರದ ಲೈಬ್ರರಿಯಲ್ಲಿರುವ ಮೆಕೆನ್ಸಿ ಕಲೆಕ್ಶನ್ನುಗಳಲ್ಲೂ, ದೇವಸ್ಥಾನವು ಮುಂಚೆಂದ ವಿಷ್ಣುದೇವಸ್ಥಾನವಾಗಿತ್ತು ಎಂಬ ಈ ಕಾಲದ ದೇವಸ್ಥಾನದ ಪ್ರಕಟಣಾ ಪುಸ್ತಕಗಳು ಏನೇನೂ ಸತ್ಯವನ್ನು ಪ್ರಕಟಿಸುತ್ತಿಲ್ಲ ಎಂದು ರುಜುಮಾಡುವಂಥವು, ಎಂಬುದಾಗಿ ಚಿತ್ತೂರಿನ ತಹಸಿಲ್ದಾರರೂ ಎಂಡೌಮೆಂಟ್ ಇಲಾಖೆಯ ಎಸಿಸ್ಟೆಂಟ್ ಕಮೀಶನರೂ ಆಗಿದ್ದ ಎ. ಎಸ್. ಶ್ರೀನಿವಾಸರಾಯರು ತಮ್ಮ Sri Venkateswara-Balaji ಎಂಬ ಪುಸ್ತಕದಲ್ಲಿ ಧಾರಾಳವಾಗಿ ವಿವರಿಸಿದ್ದಾರೆ. ಎಲ್ಲ ಭಾವನೆಗಳಿಗೂ ಎಡೆಯಿದ್ದ ಈ ಕ್ಷೇತ್ರದ ಬಗ್ಗೂ ಎಂಥ ಅತ್ಯಂತ ಸಂಕೋಚ ಭಾವನೆ! ಇದೇ ರೀತಿಯಲ್ಲಿ ಉಡುಪಿಯ ಹತ್ತಿರದ ಸುಬ್ರಹ್ಮಣ್ಯ ದೇವಸ್ಥಾನ ಒಂದು ಬಲರಾಮಕ್ಷೇತ್ರ ವಾಯಿತು! ಆದರೂ ಅಲ್ಲಿನ ಪರಂಪರಾನುಗತವಾಗಿ ಬಂದ ಸ್ಮಾರ್ತತಂತ್ರಿಗಳು ಸುಬ್ರಹ್ಮಣ್ಯ ಧ್ಯಾನ ಶ್ಲೋಕವನ್ನೇ ಅಲ್ಲಿ ಈಗಲೂ ಉಪಯೋಗಿಸುತ್ತಾರೆ! ಪರಶು ರಾಮ ಸೃಷ್ಟಿಯ ಸಪ್ತ ಕ್ಷೇತ್ರಗಳಲ್ಲಿ ಒಂದಾದ, ಈಗಲು ಒಂದು ಸ್ಮಾರ್ತಪಂಥದವರಿಗೆ ಗುರುದೇವಾಲಯವಾದ, ಅತಿ ದೊಡ್ಡ ವೈಭವಯುಕ್ತ ಲಿಂಗವಿರುವ, ಅನಂತೇಶ್ವರನನ್ನು ಅನಂತಾಸನ ಮಾಡಿ ಗರುಡಧ್ವಜ ಏರಿಸಿದ್ದೂ ನಡೆದಿದೆ! ಕುಂಭಕಾಶಿಯೆಂಬ ಮತ್ತೊಂದು ಸಪ್ತ ಕ್ಷೇತ್ರದ ಹೆಸರಾಗಿ, ಸ್ಥಳಪುರಾಣವೂ ಈಗ ಬದಲಾಯಿಸಲ್ಪಟ್ಟಿದೆ ಆದರೆ ಇವೆಲ್ಲವೂ ಸತ್ಯನಾರಾಯಣನ ಭಕ್ತಿರಿಂದ ಅವನ ಪ್ರೀತ್ಯರ್ಥವಾಗಿ ನಡೆದವು ಎಂದರೆ ಎಷ್ಟು ಆಶ್ಚರ್ಯವಾಗಬೇಕು!

ಸನಾತನ ಧರ್ಮಕ್ಕೆ ವೇದಕ್ಕಿಂತ ಮೇಲ್ಪಟ್ಟದ ಆಧಾರ ಗ್ರಂಥವಿಲ್ಲ; ಆ ಮೇಲೆ ಸ್ಮೃತಿಗಳು, ಅನಂತರ ಇತಿಹಾಸ ಪುರಾಣಗಳು, ಎಂಬುದು ಈ ಹೊಸ ಆಚಾರ್ಯರ ಕಾಲದ ಮುಂಚೆ ಸರ್ವತ್ರ ಒಪ್ಪಲ್ಪಟ್ಟ ಕ್ರಮವಾಗಿತ್ತು. ಆದರೆ ಇದರ ಪ್ರಥಮ ಧಿಕ್ಕಾರವಾಗಿ ಆ ಮುಂಚೆಯೇ ಪಂಚರಾತ್ರ ಗ್ರಂಥಗಳ ರಚನೆಯಲ್ಲಿ ವೇದದ ತಾತ್ಸಾರವೂ ನಡೆದಿತ್ತು. ಅದು ಈ ಹೊಸ ಆಚಾರ್ಯರಿಗೆ ತಮ್ಮ ಹೊಸ ಪಂಥಗಳನ್ನು ಕಟ್ಟಲಿಕ್ಕೆ ಆದರ್ಶವಾಯಿತು. ಆದರಿಂದಾಗಿ ಮೂರನೆ ಮಟ್ಟದ ಪುರಾಣಗಳಿಗೆ ಕೆಲವರುಗಳಿಗೆ ಪ್ರಥಮ ವರ್ಗದ್ದಾದ ವೇದದ ಸರಿಸಮಾನತೆ ಕೊಟ್ಟದ್ದಾಯಿತು. ಅಸಲು ತಮಗೆ ಅನುಕೂಲವಲ್ಲದ ಪುರಾಣಗಳನ್ನು ತಾಮಸಿಕ ರಾಜಸಿಕ ಎಂದು ಖಂಡಿಸಿದ್ದಾಯಿತು. ಅವಲ್ಲಿ ತಮಗೆ ಬೇಕಾದಂತೆ ಹೊಸ ಶ್ಲೋಕಗಳನ್ನೋ ಇಡೀ-ಅಧ್ಯಾಯಗಳನ್ನೋ, ಸೇರಿಸಿದ್ದಾಯಿತು. ಆ ಮೇಲೆ ಪುರಾಣಗಳಲ್ಲೂ ತಮ್ಮ ಪಂಥಕ್ಕೆ ಕೇವಲ ಭಾಗವತವೇ ಆಧಾರ ಎಂದು ಸಾರಿದ್ದೂ ಆಯಿತು. ಸಾಧಕರ ಒಲವು ಹೊಂದಿ ಮೋಕ್ಷದ ಸಾಧನೆಗೆ ಹಲವು ಸಾಧನಾ ಮಾರ್ಗಗಳನ್ನು ನಮ್ಮ ಧರ್ಮವು ಸಾರಿರುವಾಗ, ಕೇವಲ ಸಗುಣ ಭಕ್ತಿ, ಪುಷ್ಟಿಮಾರ್ಗ, ಶರಣಾಗತಿ ಮಾತ್ರವೇ ದಾರಿ ಎಂದೂ ಪ್ರತಿಪಾದಿಸಿದ್ದಾಯಿತು.

ಸಂಸ್ಕೃತ ಮತ್ತು ಧಾರ್ಮಿಕ ಸಂಸ್ಕೃತಿ ಬಿಟ್ಟುಹೋಗಬೇಕು; ಇಡೀ ದೇಶದ ಧರ್ಮದ ಆಧಾರ ಗ್ರಂಥಗಳಿಗೆ ಆ ದೇವಭಾಷೆ ಮಾತ್ರ ಇರಲಿ; ಬೇಕಾದರೆ ಅಲ್ಲಲ್ಲಿನ ಪ್ರಾಂತಿ ಭಾಷೆಗಳ ಭಾಷಾಂತರ ಸೇರಿಸಿಕೊಳ್ಳುವ; ಎಂಬ ಕ್ರಮವೂ ಕೆಲವು ಆಚಾರ್ಯರಿಗೆ ಸರಿಬೀಳಲಿಲ್ಲ. ತಮಿಳು ಪ್ರಬಂಧಗಳು, ಕನ್ನಡ ವಚನಗಳು, ಬ್ರಜ ಭಾಷೆಗಳಲ್ಲೇ ತಮ್ಮ ಧರ್ಮದ ಆಧಾರ ಗ್ರಂಥಗಳ ಮುಂತಾದವನ್ನೂ ಅವರು ಪ್ರಚಾರಕ್ಕೆ ತಂದುದುಂಟು.

ಹೀಗೆ ಹಲವು ರೀತಿಗಳಲ್ಲಿ, ಅಪಾರ ಮಟ್ಟದಲ್ಲಿ ಒಳ ಭಿನ್ನತೆ ಬೆಳೆಸಿಕೊಂಡು ಬಂದ ಹಿಂದೂ ಧಾರ್ಮಿಕ ಸಮಾಜವು ಇನ್ನು ಬೇಗ ಒಗ್ಗಟ್ಟು ಬೆಳೆಸುವುದೆಂಬುದುಂಟೆ! ಸಂಘ ಶಕ್ತಿ ಬೆಳೆಸಿ ತನ್ನನ್ನು ಎದಿರಿಸುವ ಅಪಾರ ಹೊರ ಶತ್ರುಗಳನ್ನು ಸೋಲಿಸಿ ತನ್ನ ಕೀರ್ತಿ ಪುನಃ ಬೇಗ ಮೆರೆಸುವುದುಂಟೆ! ಹೊಸ ಆಚಾರ್ಯರು ಪ್ರತಿಯೊಬ್ಬರೂ ತಾವು ಹಿಂದುಗಳೆಂದರೂ, ದೇವರು ಒಬ್ಬನೇ ಎಂದು ಒಪ್ಪಿದರು ಹಿಂದೂ ಧರ್ಮವನ್ನು ಕೇಂದ್ರೀಕರಿಸುವ ಒಂದೇ ಒಂದು ಕ್ರಮವನ್ನೂ ಪ್ರಚಾರಕ್ಕೆ ತಂದವರಲ್ಲ ಎಂಬುದು ಕಂಡಾಗ ಪರಮಾಶ್ಚರ್ಯವಾಗುತ್ತದೆ. ಅದೂ ಇಡೀ ದೇಶದ ಧರ್ಮವನ್ನು ಒಂದೇ ಒಂದಾದ ಮುಸಲ್ಮಾನ ಧರ್ಮವು ಎಲ್ಲೆಲ್ಲೂ ಎದುರಿಸುತ್ತಿದ್ದಾಗಲೂ ಬೇಕಾದುದು ಛಿದ್ರೀಕರವಲ್ಲ; ತಮ್ಮ ಧರ್ಮಪಂಥಗಳಲ್ಲಿ ಐಕ್ಯತೆ ಬೆಳೆಸುವ ದಾರಿಗಳುಮಾತ್ರ ಎಂಬ ಭಾವನೆ ಇವರ್ಯಾರಿಗೂ ಬಾರದ್ದು ಅತ್ಯಂತ ಆಶ್ಚರ್ಯವನ್ನುಂಟು ಮಾಡುತ್ತದೆ.

ಈ ಭಾಗದಲ್ಲಿ ಈ ಹೊಸ ಆಚಾರ್ಯರಿಗೆ ಧರ್ಮದ ಐಕ್ಯಮತ್ಯ ಸಾಧಿಸಲಿಕ್ಕೆ ತಮಗೇ ದಾರಿ ಹೊಳೆಯದಿದ್ದರೂ ಶ್ರೀಶಂಕರಾಚಾರ್ಯರು ದೇಶದಲ್ಲಿ ಇದಕ್ಕಾಗಿಯೇ ಪ್ರಚಾರಕ್ಕೆ ತಂದಿದ್ದ ಪಂಚಾಯತನ ಪೂಜಾಕ್ರಮದ ಅರ್ಥವೂ ಆಗದ್ದು ವಿಷಾದಕರ. ಅದು ಅಷ್ಟರವರೆಗೂ ಹಿಂದೂ ಧರ್ಮದಲ್ಲಿ ಸಾಧಿಸಿದ್ದ ಐಕ್ಯಮತ್ಯದ ಸಜೀವ ದೃಷ್ಟಾಂತವು ಅವರಿಗೆ ತೋರದ್ದಾದುದೂ ತುಂಬಾ ಆಶ್ಚರ್ಯ ಅದರ ಅವಶ್ಯಕತೆ, ಅದರ ಅಪಾರ ಬೆಲೆ, ಅರ್ಥವಾಗುವ ಬಗ್ಗೆ ಅದರ ನಾಶ ಸಾಧಿಸಲೇಬೇಕೆಂಬ ಛಲ ಅವರೆಲ್ಲರಿಗೂ ಉಂಟಾದುದು ತುಂಬಾ ಪಶ್ಚಾತ್ತಾಪ ಪಡಬೇಕಾದ ವಿಚಾರ.

ಈ ಆಚಾರ್ಯರುಗಳು ಬಂದ ಮುಖ್ಯ ಕಾರ್ಯವಾದ ಭಕ್ತಿಯ ದಾರಿಯ ಬೆಳವಣಿಗೆಗೆ, ಭಕ್ತನು ತನಗೆ ಒಗ್ಗುವ ಇಷ್ಟದೇವತೆಯನ್ನು ಮಾತ್ರವೇ ಅತಿ ಚೆನ್ನಾಗಿ ಪ್ರೀತಿಸಲು ಕಲಿಯಬೇಕಾಗುತ್ತದೆ ನಿಜ. ಜನರ ಪೂರ್ವವಾಸನೆಯಂತೆ, ಅವರ ಭಿನ್ನ ಒಲವಂತೆ, ಅವರು ಇದಕ್ಕಾಗಿ ಬೇರೆ ಬೇರೆ ಲಕ್ಷಣಗಳ ದೇವರನ್ನು ಆರಿಸಲು ಅವರಿಗೆ ಆಸ್ಪದ ಇರಬೇಕೆಂಬುದೂ ಸರಿಯೇ. ನಮ್ಮ ಧರ್ಮವು ಇದನ್ನು ಅರಿತಷ್ಟು ಚೆನ್ನಾಗಿ ಬೇರೆ ಯಾವ ಧರ್ಮವೂ ಅರಿಯದು. ಆದ್ದರಿಂದಲೇ ನಮ್ಮ ಧರ್ಮದಲ್ಲಿ ಹಲವು ತರದ ದೇವರುಗಳು, ಇದ್ದಾರೆ ಒಂದೇ ದೇವರ ಒಂದು ಅವತಾರ ಇನ್ನೊಂದರಂತಲ್ಲದಿರುವುದೂ ಕಾಣುತ್ತೇವೆ. ಆದರೆ ಈ ಉಪಾಸನೆಯ ತುತ್ತುದಿಯ ಗುರಿ, ಕಟ್ಟಕಡೆಗಾದರೂ ಎಲ್ಲ ದೇವರೂ ಒಂದೇ ಎಂಬ ಭಾವನೆಗೆ ಮುಟ್ಟಿಸುವುದಾಗಿದೆ ಸಾಕಾರದ ದೇವರಾದ ಶ್ರೀ ವಿಠೋಬನ ಅತ್ಯಂತ ಪರಮಭಕ್ತ ನಾಮದೇವರಿಗೆ, ಆ ದೇವರೇ ಕಟ್ಟ ಕಡೆಗೆ ಅದ್ವೈತ ಭಾವನೆಯ ಪಾಠ ಕಲಿಯಲು ಸೂಚಿಸಿದ್ದರು. ಆದ್ದರಿಂದ ದೇವರಲ್ಲಿನ ಭಿನ್ನತೆಯ ಭಾವನೆಯನ್ನು ಬೆಳೆಸುತ್ತ ಹೋಗುವುದೇ ಧರ್ಮದ ಗುರಿಯಾಗಲಾರದು. ಪಂಚಾಯತನ ಪೂಜೆಯಲ್ಲಿ ಈ ಭಿನ್ನತೆಯ ಭಾವನೆಯನ್ನು ಮಿತವಾದ ಮಟ್ಟದಲ್ಲಿಟ್ಟುಕೊಂಡು, ಅದರೊಡನೆ ಐಕ್ಯಮತ್ಯದ ಗುರಿಯೂ ತಪ್ಪದೆ ಬೆಳೆಯುವಂತೆ ಮಾಡುವುದೇ ಕ್ರಮವಾಗಿತ್ತು.

ವಿದ್ಯಾರ್ಥಿಗಳ ವೈಯ್ಯಕ್ತಿಕ ಮಟ್ಟದಲ್ಲಿ ಅಪಾರ ಭಿನ್ನತೆಯಿದ್ದರೂ, ಆತಳಹದಿಯಮೇಲೆ ಮಾತ್ರವೇ ಅವರಿಗೆ ಪಾಠ ಹೇಳಬೇಕಾಗುತ್ತದಾದರೂ, ಕಾರ್ಯಾರ್ಥ ಆ ಕೆಲಸ ನಡೆಸುವುದು ಸಾಧ್ಯವಾಗಲಿಕ್ಕೆ ಅವರನ್ನೆಲ್ಲ ಕೆಲವೇ ಕ್ಲಾಸುಗಳಾಗಿ ವಿಂಗಡಿಸುವಂತೆ, ಭಿನ್ನ ಒಲವುಗಳಿಗೆ ಬೇಕಾದ ದೇವರ ಹಲವು ಲಕ್ಷಣಗಳನ್ನೆಲ್ಲ, ಕೇವಲ ಶಿವ, ವಿಷ್ಣು, ದೇವಿ, ಸೂರ್ಯ, ಗಣಪತಿ ಯೆಂಬ ದೇವರುಗಳ ಪೂಜೆಗಳ ಮಿತಿಯೊಳಗೆ ಪೂರೈಸಲು ಸಾಧ್ಯ ಎಂಬುದರಿಂದ ಪಂಚಾಯತನ ಪೂಜೆಯಲ್ಲಿ ಈ ದೇವರುಗಳು ಮಾತ್ರವೇ ಆರಿಸಲ್ಪಟ್ಟಿವೆ ಇವರೆಲ್ಲರನ್ನೂ ನಮ್ಮ ವೇದವೇ ಹೊಗಳಿ, ಅವರ ಪೂಜೆಯಲ್ಲಿ ಅಭಿಷೇಕಕ್ಕೆ ಬೇಕಾದ ಸೂಕ್ತಗಳನ್ನು ಕೊಟ್ಟಿದೆ.

ಪೂಜಕನು ಇವುಗಳ ಪೈಕಿ ತನ್ನ ಇಷ್ಟದೇವರನ್ನು ಪ್ರಧಾನ ದೇವರಾಗಿ ನಡುವೆ ಇಟ್ಟು ಇತರ ನಾಲ್ಕುದೇವರನ್ನು ಸುತ್ತಲೂ ಪರಿವಾರ ದೇವರಾಗಿ ಇಟ್ಟು ಪೂಜಿಸುವುದು ಪಂಚಾಯತನ ಪೂಜಾಕ್ರಮ. ತನ್ನ ಇಷ್ಟದೇವರನ್ನಲ್ಲದೆ ನಾಲ್ಕು ಬೇರೆ ಬೇರೆ ತರದ ಇತರ ದೇವರನ್ನೂ ಇಟ್ಟು ಪೂಜಿಸುವವರು ಹಿಂದೂ ಇತರ ಪಂಥದವರ ದೇವರನ್ನು ತಾತ್ಸಾರಿಸದ ವಿಶಾಲ ಭಾವನೆ ಹೊಂದುತ್ತಾರೆ ಎಂಬುದು ಶ್ರೌತ ಸ್ಮಾರ್ತ ಕ್ರಮದ ಈ ತರದ ಪೂಜೆ ನಡೆಸುತ್ತಿರುವವರ ಅನುಭವದಿಂದ ಧಾರಾಳವಾಗಿ ಒಪ್ಪಬಹುದು ಇಷ್ಟದೇವತೆಯ ಆರಿಸುವಿಕೆಗೆ ಪಂಚಾಯತನ ಪೂಜೆಯಲ್ಲಿ ಭಿನ್ನ ಭಿನ್ನತರದ ಅಭಿರುಚಿಯುವರಿಗೆಲ್ಲರಿಗೂ ಧಾರಾಳವಾದ ಆಸ್ಪದವಿದೆ. ಶಿವನ ನಿರಾಡಂಬರತೆ ಜ್ಞಾನ ತಪಸ್ಸು ವೈರಾಗ್ಯಗಳ ದಾರಿಗಳಿಂದ ಆಕರ್ಷಿತನಾಗುವ ಸಾಧಕನು ಈ ಪೂಜೆಯಲ್ಲಿ ಶಿವನನ್ನು ಪ್ರಧಾನ ದೇವರಾಗಿ ಆರಿಸಬಹುದು. ಸೌಂದರ್ಯ, ವೈಭವ, ಅಲಂಕಾರ, ವಿಷ್ಣು ಭಕ್ತಿ ಬೆಳೆಸಬೇಕೆಂಬವನು ವಿಷ್ಣುವನ್ನು ಪ್ರಧಾನದೇವತೆ ಮಾಡುತ್ತಾನೆ ತನ್ನ ದುರ್ಬಲತೆ ಚೆನ್ನಾಗಿ ಬಲ್ಲವನಾಗಿ, ದೇವರು ಕರುಣಾಮೂಯಿ ತಾಯಿಯಂತಿದ್ದರೆ ಮಾತ್ರವೇ ತನ್ನ ಉದ್ಧಾರ ಸಾಧ್ಯ ಎಂಬ ಮನೋಭಾವನೆಯ ಸಾಧಕನು ಅಲ್ಲಿದೇವಿಗೆ ಪ್ರಧಾನ ಸ್ಥಾನ ಕೊಡುವನು ತನ್ನ ಅಪಾರ ಸಾಧನಗಳಲ್ಲಿ ತೊಡಕಿಲ್ಲದಜಯ ಬೇಕಾದವನಿಗೆ ಗಣಪತಿಯ ಪ್ರಾಧಾನ್ಯಕ್ಕೆ ಎಡೆಯಿದೆ ಮಾನವನ ಬಾಳಿಗೆ ಬೇಕಾದ ಉಷ್ಣ ಬೆಳಕು ನೀರು ಆಹಾರ ಕೊಟ್ಟು ತನ್ನ ಜ್ಞಾನಸ್ವರೂಪದ ತೇಜಸ್ಸನ್ನು ಬೀರುವ ಪ್ರತ್ಯಕ್ಷ ದೇವರಂತಿರುವ ಸೂರ್ಯನ ವಿಶೇಷ ಚಿಂತನೆಗೆ ಅವನನ್ನು ಪ್ರಧಾನ ದೇವರಾಗಿ ಮಾಡಿದರಾಯಿತು. ಭಗವಾನ್ ವ್ಯಾಸರು ತಮ್ಮ ಪುರಾಣಗಳಲ್ಲೂ ಯಾವ ದೇವರನ್ನು ಒಂದು ಪುರಾಣಕ್ಕೆ ಪ್ರಧಾನ ದೇವರಾಗಿ ಆರಿಸಿದರೋ ಆ ದೇವರಿಗೆ ಅತ್ಯಂತ ಹಿರಿಮೆಯ ಸ್ಥಾನ ಇತರರಿಗೆ ಕೆಳಮಟ್ಟದ ಸ್ಥಾನದ ಕ್ರಮವನ್ನೇ ಅನುಸರಿಸಿದ್ದಾರೆ.

ಒಂದೊಂದೇ ದೇವರನ್ನು ಮಾತ್ರ ಆರಿಸಿ ಇತರ ದೇವರನ್ನು ದ್ವೇಷಿಸುವ ಕ್ರಮದ ದೋಷದ ಪರಿಹಾರಕ್ಕಾಗಿಯೇ ಶ್ರೀಶಂಕರಾಚಾರ್ಯರು ಪಂಚಾಯತನ ಕ್ರಮವನ್ನು ಆಚರಣೆಗೆ ತಂದರು. ಈ ತರದ ಪೂಜೆ ಪ್ರತಿದ್ವಿಜನ ಮನೆಯಲ್ಲೂ ಬಳಕೆಗೆ ಬಂದು ಜನರ ಪರಸ್ಪರ ದ್ವೇಷ, ಅಸಹನೀಯತೆ. ದೇಶದಿಂದ ಮಾಯಕವಾಗುವಂತಾಯಿತು ಈ ದೇವರುಗಳಿಗೂ ಸ್ಪಷ್ಟರೂಪದ ಮೂರ್ತಿಗಳ ಬಗ್ಗೆ ಸಾಲಿಗ್ರಾಮ ಶಿಲೆ, ಶಿವಲಿಂಗ, ಸ್ಪಟಿಕ ಮಣಿ, ಅಂಬಿಕಾಶಿಲೆ, ಗಣಪತಿ ಕಲ್ಲುಗಳನ್ನು ಉಪಯೋಗಿಸುವ ಕ್ರಮದಿಂದ ಮತ್ತು ಈ ದೇವರುಗಳ ಆವಾಹನೆಗೆ ತನ್ನ ಸ್ವಂತ ಹೃದಯದಲ್ಲಿನ ಆತ್ಮ ಶಕ್ತಿಯನ್ನೇ ತುಂಬುವ ಕ್ರಮದಿಂದ, ಈ ಸಗುಣರೂಪದ ಪೂಜೆಯ ಆರಂಭವು ಕ್ರಮೇಣ ಆದಷ್ಟು ನಿರಾಕಾರದ ಕಡಿಗೆ ಬೆಳೆಯಲಿಕ್ಕೂ ಅವರು ಆಸ್ಪದ ಕಲಿಸಿದ್ದಾರೆ. ಇವನ್ನೆಲ್ಲ ಊಹಿಸಬಹುದಾಗಿದ್ದ ಹೊಸ ಆಚಾರ್ಯರೇ ಈ ಒಗ್ಗಟ್ಟಿನ

ತಲಕಟ್ಟನ್ನು ನಾಶಮಾಡಿ ಮುಂಚಿನ ತುಂಬಾ ಒಳಒಡಕುಗಳ ಪರಿಸ್ಥಿತಿಯನ್ನೇ ಪುನಃ ಸ್ಥಾಪಿಸುತ್ತ ಬಂದುದು ತುಂಬಾ ಆಶ್ಚರ್ಯವನ್ನೂ ವಿಷಾದವನ್ನೂ ಉಂಟು ಮಾಡುತ್ತದೆ.

ನಾಮದೇವರು ಶ್ರೀ ವಿಠೋಬನ ಸಗುಣರೂಪದ ಅತ್ಯಂತ ಪ್ರಿಯ ಉಪಾಸಕ ರಾಗಿದ್ದರೂ, ಅವರು ಎಲ್ಲ ದೇವರ ಮೂಲನಾದ ನಿರ್ಗುಣ ಬ್ರಹ್ಮದ ಉಪಾಸಕರಾ ಗಲಿ ಎಂದು ಆ ದೇವರ ಪ್ರೇರಣೆಯೇ ಇದ್ದಂತೆ. ಈ ಹೊಸ ಆಚಾರ್ಯರೆಲ್ಲರ ಪ್ರತಿಪಾ ದನೆಗಳಲ್ಲೂ ಹಿನ್ನೆಲೆಯಾಗಿ ಅದ್ವೈತ ವೇದಾಂತದ ಪರಬ್ರಹ್ಮದ ಜ್ಞಾನವೂ ಸೇರು ವಂತೆ ಮಾಡಿದ್ದರೂ, ಜನರ ಒಳ ಒಡಕು ಹೆಚ್ಚು ಬೆಳೆಯುತ್ತಿರಲಿಲ್ಲ.

ಒಂದು ಸೂತ್ರವು ಸರದ ಮಣಿಗಳನ್ನೆಲ್ಲ ಒಟ್ಟು ಕೂಡಿಸುವಂತೆ ಎಲ್ಲ ಹಿಂದೂ ಧರ್ಮದ ಒಳ ವಿಭಾಗಗಳನ್ನು ಒಟ್ಟುಕೂಡಿಸಲಾಪ ಶ್ರೀ ಶಂಕರಾಚಾರ್ಯರ ನಿರ್ಗುಣ ಬ್ರಹ್ಮದ ಪ್ರತಿಪಾದನೆಯಿಂದ ದೇಶದಲ್ಲಿ ಆಗ ಪ್ರಚಾರದಲ್ಲಿದ್ದ ಆ ಭಾವನೆ ಯನ್ನೂ ಈ ಆಚಾರ್ಯರೆಲ್ಲ ಸರ್ವ ಪ್ರಯತ್ನದಿಂದ ನಾಶಮಾಡಿದರು.

ಧರ್ಮದ ಕ್ಷೇತ್ರದಲ್ಲಾದರೂ ಕೃತಜ್ಞತೆ ಸಲ್ಲಬೇಕಾದಲ್ಲಿ ಅದನ್ನು ಸಲ್ಲಿಸು ವುದು ಅತ್ಯಗತ್ಯ. ಅದರ ವಿರುದ್ಧ ವರ್ತನೆ ಎಷ್ಟಕ್ಕೂ ಸಲ್ಲದು. ಹೊಸ ಆಚಾರ್ಯರು ಶ್ರೀ ಶಂಕರಾಚಾರ್ಯರ ಅದ್ವೈತದ ಖಂಡಣೆಯ ರಭಸದಲ್ಲಿ ಈ ಸರ್ವ ಸಾಮಾನ್ಯ ನ್ಯಾಯವನ್ನು ಮರೆತುದೂ ತುಂಬಾ ಪಶ್ಚಾತ್ತಾಪಕರ. ಶ್ರೀ ಶಂಕರಾಚಾರ್ಯರು ಬೌದ್ಧಧರ್ಮ ನಾಶಮಾಡದಿದ್ದರೆ ಅದು ಬೆಳೆದು ಈ ಹೊಸ ಆಚಾರ್ಯರ ಕಾಲದಲ್ಲಿ ದೇಶವನ್ನೆಲ್ಲ ಬಹುಮಟ್ಟಿಗೆ ತುಂಬುತ್ತಿತ್ತು. ತಾವು ಸೋಲಿಸಲಾರದ ಈ ಬೌದ್ಧರು, ಅಥವಾ ಇಂಡೋನೇಶಿಯ ಪೂರ್ವ ಬಂಗಾಳ ಮುಂತಾದಕಡೆಗಳಲ್ಲಾದಂತೆ ಅವರೇ ಮುಸುಲ್ಮಾನ ಧರ್ಮಕ್ಕೆ ಸುಲಭವಾಗಿ ಮತಾಂತರ ಹೊಂದಿದದವರು, ದೇಶವನ್ನು ತುಂಬುತ್ತಿದ್ದರು. ಈ ಹೊಸ ಆಚಾರ್ಯರಿಗೆ ಆಗ ಉಸಿರೆತ್ತಲುಕೂಡ ಅವಸರ ಸಿಕ್ಕು ತ್ತಿರಲಿಲ್ಲ. ಆದ್ದರಿಂದ ತಮ್ಮ ಧರ್ಮ ಪ್ರಚಾರ ಸಾಧ್ಯಮಾಡಿದ ಹಿಂದೂ ಧರ್ಮದ ಏಕಮಾತ್ರ ರಕ್ಷಕರಾಗಿದ್ದ ಶ್ರೀ ಶಂಕರಾಚಾರ್ಯರ ಬಗ್ಗೆ ಕೃತಜ್ಞತೆಯ ಒಂದುಮಾತೂ ಎತ್ತದೆ, ಕೆಲವು ಆಚಾರ್ಯರು ಅವರ ವಿಚಾರ ವಿರೋಧವನ್ನೇ ಬೆಳೆಸಿದ್ದರೆಂದರೆ ಎಷ್ಟು ಶೋಚನೀಯ! ನೆರೆಯ ಹಾವಳಿಗೆ ಈಡಾಗುವ ಜಾಗದಲ್ಲಿ ಉತ್ತಮ ಧನಿಯು ಭದ್ರವಾದ ತಲಗಟ್ಟನ್ನು ಕಟ್ಟಿ ಕೊಟ್ಟಿರುವಲ್ಲಿ ತಮ್ಮ ಗುಡಿಸಲು ಕಟ್ಟಿಕೊಂಡು ಕುಳಿತು ಆ ಧನಿಯನ್ನು ನಿರಾಕರಿಸುವ ಕಮ್ಯೂನಿಸ್ಟರ ಕ್ರಮ ಧಾರ್ಮಿಕ ವಿಭಾ ಗಕ್ಕೆ ಎಷ್ಟಕ್ಕು ಅನ್ವಯಿಸಕೂಡದಿತ್ತು.

ಅಂತೂ ಹಿಂದೂ ಧರ್ಮದ ರಕ್ಷಣೆ ಇನ್ನಾದರೂ ನಡೆಯಬೇಕಾದರೆ ನಮ್ಮನ್ನು

ಏಕೀಕರಿಸುವ ಭಾವನೆಗಳು ಇನ್ನಾದರೂ ನಮ್ಮಲ್ಲಿ ಬೆಳೆಯುವುದು ಅತ್ಯಗತ್ಯ. ಆದರೆ ಅವರವರ ಆಚಾರ್ಯರ ಬೋಧನೆಯ ಎದುರು ಸಾಮಾನ್ಯರ ಎಚ್ಚರಿಕೆಯ ಮಾತಿಗೆ ಏನೂ ಬೆಲೆ ಬರಲಾರದು, ಭವಿಷ್ಯವು ಕಗ್ಗತ್ತಲೆಯಲ್ಲಿ ಮುಳುಗಿದೆ. ಆದರೆ ತೀರಾ ನಿರಾಶೆಗೆ ಆಸ್ಪದ ಕೊಡದೆ ಒಂದು ಮುಂಬೆಳಗಿನ ಲಕ್ಷಣವೂ ಸ್ವಲ್ಪ ಇದೆ. ನಮ್ಮ ಧರ್ಮವನ್ನು ನಾಶಮಾಡುತ್ತಿರುವ ವಿಜ್ಞಾನವೇ ಈ ಆಚಾರ್ಯರುಗಳ ಸಂಕೋಚತರದ ಕಟ್ಟುಗಳನ್ನೂ ನಾಶಮಾಡುತ್ತಿದೆ. ಅವುಗಳಿಂದ ಬಿಡುಗಡೆ ಹೊಂದಿದವರಲ್ಲಿ ಬಹು ಮಟ್ಟಿನವರು ನಾಸ್ತಿಕರೇ ಆಗುತ್ತಿದ್ದಾರೆ. ಆದರೆ ಅವರಲ್ಲಿ ಸ್ವಲ್ಪ ಅಂಶದವರು ನಮ್ಮಲ್ಲಿ ಪುನಃ ಒಗ್ಗಟುಸ್ಥಾಪಿಸಲಾಪ ಅದ್ವೈತ ವೇದಾಂತದ ಪ್ರತಿಪಾದನೆಗಳಿಂದ ಆಕರ್ಷಿತರಾಗುತ್ತಿರುವುದನ್ನೂ ಕಾಣುತ್ತಿದ್ದೇವೆ ಮಾತ್ರವಲ್ಲ, ಈ ಅದ್ವೈತ ವೇದಾಂತವು ಈಗ ಇಡೀ ಭೂಲೋಕದಲ್ಲೇ ಒಂದು ತರದ ಧಾರ್ಮಿಕ ಒಗ್ಗಟ್ಟನ್ನು ಸ್ಥಾಪಿಸುವ ಸೂಚನೆಗಳೂ ತೋರುತ್ತಿದೆ ಅದರ ವಿಚಾರ ಮುಂದಿನ ಅಧ್ಯಾಯದಲ್ಲಿ ನೋಡುವ



## ೭. ಅದ್ವೈತ ವೇದಾಂತದ ಭವಿಷ್ಯ.



ಈ ಕಾಲವು ಅದ್ಭುತತರದ್ದು. ಜನರ ಲೌಕಿಕ ಜೀವನದಲ್ಲಿ ಹಿಂದೆ ಹಲವು ಸಾವಿರ ವರ್ಷಗಳಲ್ಲಾಗದಿದ್ದ ಬದಲಾವಣೆಗಳು ಈಗ ಕೇವಲ ಐವತ್ತು ವರ್ಷಗಳಲ್ಲಿ ನಡೆದಿವೆ ಲೌಕಿಕ ಜೀವನದಲ್ಲಿ ಜನರಿಗೆ ವಿಪರೀತವಾದ ಅಭಿರುಚಿ ಬೆಳೆಯುತ್ತಿದ್ದು ಅದೇಮಟ್ಟದಲ್ಲಿ ಧರ್ಮದ ಅಭಿರುಚಿ ನಾಶವಾಗುತ್ತಿದೆ, ಹೊಸ ಜನಾಂಗದಲ್ಲಂತೂ ಧರ್ಮದಲ್ಲಿನ ಶ್ರದ್ಧೆ, ಅದರ ಬಗ್ಗೆ ಉತ್ಸಾಹ, ತೀರಾ ಕಡಿಮೆಯಾಗಿದೆ. ಆದರೆ ಹೀಗೆ ಧರ್ಮವು ನಶಿಸುತ್ತಿರುವಂತೆ ಕಾಣುವ ಕಾಲದಲ್ಲೂ ಒಂದು ಆಶಾಕಿರಣ ತೋರುತ್ತಿದೆ. ಶ್ರೀಶಂಕರಾಚಾರ್ಯರು ತಮ್ಮ ಅತ್ಯದ್ಭುತ ಶಕ್ತಿಯಿಂದ ಸಮರ್ಥಿಸಿದ ಅದ್ವೈತತತ್ವದ ಪ್ರಚಾರವು ಈ ಕಾಲದಲ್ಲೂ ಬೆಳೆಯುತ್ತಿರುವುದರ ಶುಭಸೂಚನೆಗಳಿವೆ. ಅವನ್ನು ಅದ್ವೈತೀ ಪಂಥದವರಾದ ನಾವು ಅಗತ್ಯವಾಗಿ ತಿಳಕೊಂಡಿರಬೇಕು. ಮತ್ತು ಅವುಗಳಿಂದ ಸ್ಫೂರ್ತಿಹೊಂದಿಯಾದರೂ ಅದರಲ್ಲಿನ ನಮ್ಮ ಶ್ರದ್ಧೆ ಅದರ ತಳಹದಿಯಾದ ಶ್ರೌತಸ್ಮಾರ್ತ ಆಚಾರಗಳ ಅಭ್ಯಾಸ, ಹೊಸ ಹುರುಪಿಂದ ನಡೆಸಲು ಕಲಿಯಬೇಕು,

ಈ ಕಾಲದ ಧಾರ್ಮಿಕ ಚಿನ್ಹೆಗಳ ತುಲನೆಗೆ ಹಿನ್ನೆಲೆಯಾಗಿ ನಮ್ಮ ಧರ್ಮದ ಚರಿತ್ರೆಯ ಚಿಕ್ಕ ಒಂದು ವಿಮರ್ಶೆಯೂ ಸ್ವಲ್ಪ ಪ್ರಯೋಜನವಾದೀತು. ಶ್ರೀಶಂಕರಾಚಾರ್ಯರು ಅವರ ಕಾಲದಲ್ಲಿ ನಮ್ಮ ಧರ್ಮದಲ್ಲಿ ಬೆಳೆದಿದ್ದ ತಪ್ಪು ಆಚಾರಗಳನ್ನೆಲ್ಲ

ತಿದ್ದಿದರೂ, ನಮ್ಮ ಧರ್ಮದ ಮೂಲ ತಳಹದಿಯಾದ, ಪುರಾತನಕಾಲದಿಂದ ಬಂದ ಶ್ರೌತಸ್ಮಾರ್ತ ಧರ್ಮಾಚರಣೆಗಳನ್ನು ತಿದ್ದಲಿಲ್ಲ. ಏಕೆಂದರೆ ಜೀವಾತ್ಮರನ್ನು ಭದ್ರವಾದ ಮೆಟ್ಟಲುಗಳ ಮೇಲೆ ಏರಿಸುತ್ತಹೋಗಿ ಕೇವಲ ಸಾಯುಜ್ಯ ಮೋಕ್ಷವನ್ನೇ ಮುಟ್ಟಿಸುವ ಆ ಸಾಧನವು ಕಲಿಕಾಲದಲ್ಲಿ ಆಚರಣೆಗೆ ಕಷ್ಟವಾಗುತ್ತಬಂದರೂ ಅದು ಆ ಕಾರ್ಯದ ಸಾಧನೆಗೆ ಎಣೆ ಯಿಲ್ಲದ ಸಮರ್ಥತೆಯುದಾಗಿದೆ. ಆದ್ದರಿಂದ ಸಾಧ್ಯವಾದಷ್ಟುಕಾಲ ಈ ಸಾಧನಾಕ್ರಮ ಬಾಳಲಿ ಎಂಬುದೇ ಅವರ ಉದ್ದೇಶವಾಗಿತ್ತು. ಅವರ ಕಾಲದನಂತರ ಹತ್ತನೆಯ ಶತಮಾನದವರೆಗೂ ಜನರು ಅದರ ಅಭ್ಯಾಸವನ್ನು ಅತಿಚೆನ್ನಾಗಿ ನಡೆಸಿ ಕೃತಾರ್ಥರಾದರು. ಆ ಹಿಂದಿನ ಈ ಕಾಲವನ್ನು ಶ್ರೌತಸ್ಮಾರ್ತ ಯುಗ ಎನ್ನಬಹುದು.

ಅನಂತರ ಬಂದುದು ಭಕ್ತಿ ಪಂಥದ ಯುಗ. ಆಗ ಧರ್ಮದ ಅಭ್ಯಾಸಕ್ಕೆ ಪ್ರಬಲ ತೊಡಕುಗಳು ಉಂಟಾಗಿ ಕೆಲವರಿಗಾದರೂ ಶ್ರೌತಸ್ಮಾರ್ತಕ್ರಮಗಳ ಅಭ್ಯಾಸ ಕಷ್ಟವಾದಾಗ, ಅವರಿಗೆ ಸುಲಭತರದ ದಾರಿ ತೋರಿಸಬೇಕಾಗಿಬಂತು. ಹೊಸ ಆಚಾರ್ಯರೆಲ್ಲ ಆಗ ಅಲ್ಲಲ್ಲಿ ತೋರಿಕೊಂಡು, ಆಚಾರಗಳಲ್ಲಿ ಕೊರತೆಬಂದರೂ ಮಹತ್ತಿನ ವಿಚಾರವಲ್ಲ, ಆದರೆ ದೈವಭಕ್ತಿ ಬೆಳೆಸಲು ಕಲಿಯಿರಿ. ಅದಕ್ಕಿಂತ ಸುಲಭವಾದ, ಆದರೆ ಶ್ರೇಷ್ಠವಾದ ಧಾರ್ಮಿಕ ದಾರಿ ಬೇರೆ ಇಲ್ಲ ಎಂದು ಬೋಧಿಸಿದರು. ಆ ಕಾಲದಲ್ಲೇ ದೈವೇಚ್ಛೆಯಿಂದ ದೇಶದಲ್ಲೆಲ್ಲ ವರ ಕವಿಗಳೂ ಜನ್ಮವೆತ್ತಿ ಸಂಸ್ಕೃತದಲ್ಲಿದ್ದ ನಮ್ಮ ಇತಿಹಾಸ ಪುರಾಣಗಳಿಂದ ದೇವರ ಅವತಾರಗಳ ಮನೋಹರವಾದ ಕತೆಗಳನ್ನು, ಅವರ ಅದ್ಭುತ ಲೀಲೆಗಳ ವಿವರಣೆಗಳನ್ನು, ಅವರ ಅಪಾರ ಭಕ್ತವಾತ್ಸಲ್ಯಗಳದೃಷ್ಟಾಂತಗಳನ್ನು, ಅವರ ಧಾರಾಳವಾದ ಕರುಣೆಯ ಕತೆಗಳನ್ನು, ಕನ್ನಡ, ತೆಲುಗುಮುಂತಾದ ಜನಸಾಮಾನ್ಯರ ಮಾತೃಭಾಷೆಗೆ ಇಳಿಸಿ, ರಸವತ್ತಾಗಿಹಾಡಿ ಜನರ ಹೃದಯದಲ್ಲಿ ದೈವಭಕ್ತಿ ತುಂಬಿ ತುಳುಕುವಂತೆ ಮಾಡಿದರು. ಧರ್ಮಕ್ಕೆ ಆ ಕಾಲದ ಮುಖ್ಯ ತೊಡಕಾದ ಮುಸಲ್ಮಾನರು ಹಿಂದುಗಳನ್ನು ಬುದ್ಧಿಯಮಟ್ಟದಿಂದ ಎಂದೂ ಗೆದ್ದವರೇ ಅಲ್ಲ. ಆದ್ದರಿಂದ ಆಕಾಲಕ್ಕೆ ಬೇಕಾದುದು ಸೂಕ್ಷ್ಮಮಟ್ಟದ ಜ್ಞಾನಮಾರ್ಗದ ಪ್ರತಿಪಾದನೆಯಲ್ಲ. ಭಕ್ತಿಯಮೂಲಕ ಬೆಳೆದ ಸ್ವಧರ್ಮದ ವಾತ್ಸಲ್ಯ ಮತ್ತು ತಮ್ಮ ಇಷ್ಟದೇವರಲ್ಲಿ ಭಕ್ತಿ, ಇವು ಕೆಳಮಟ್ಟದ ಜನರನ್ನೂ ಮುಸಲ್ಮಾನರ ಮತಾಂತರದ ಬೆದರಿಕೆಗಳಿಂದ ರಕ್ಷಿಸಿ, ನಮ್ಮ ಧರ್ಮವನ್ನು ಕಾಪಾಡಿತು.

ಆದರೆ ಈಗ ಇನ್ನೊಂದುತರದ ಹೊಸಯುಗವೇ ಆರಂಭಿಸಿದೆ ಈಗ ಜನರಿಗೆ ದೇವರಲ್ಲಿ ಭಕ್ತಿ ಬೆಳೆಯುವಬಗ್ಗೆ ವಿಜ್ಞಾನದಲ್ಲಿ ಭಕ್ತಿ ಬೆಳೆಯುತ್ತಿದೆ ಏಕೆಂದರೆ ಸಾಮಾನ್ಯ ಜನರು ದೇವರನ್ನು ನಂಬುವುದು, ಅವನನ್ನು ಭಜಿಸುವುದು, ಅರ್ಚಿಸುವುದು, ಕೆಲವುಮಟ್ಟಿಗಾದರೂ ಆ ಸರ್ವ ಸಮರ್ಥನು ತಮ್ಮ ಜೀವನವನ್ನು ಸುಖ

ಮಯವಾಗಿ ಮಾಡಲಿ, ತಮ್ಮ ಕಷ್ಟ ಪರಿಹರಿಸಲಿ ಎಂದು. ಆದರೆ ದೇವರಲ್ಲಿ ತುಂಬಾ ಭಕ್ತಿ ಬೆಳಸಿ ಬಾಳಿದ ಹಿಂದೂ ಜನಾಂಗಕ್ಕೆ ಸಿಕ್ಕಿದ ಆಹಾರ ಆರೋಗ್ಯ ಐಶ್ವರ್ಯ ಆಯುಷ್ಯಗಳಿಗಿಂತ ದೇವರನ್ನು ದೂರ ಇಟ್ಟು ವಿಜ್ಞಾನದ ಉಪಾಸನೆ ಚೆನ್ನಾಗಿ ನಡೆಸಿದ ಪಾಶ್ಚಾತ್ಯರಿಗೆ, ಅದು ಅತ್ಯಂತ ವಿಪುಲತೆಯ ಐಶ್ವರ್ಯವನ್ನು, ಅದ್ವಿತೀಯ ಲೌಕಿಕ ಶಕ್ತಿಯನ್ನು. ಚೆಲ್ಲಾಡುವಷ್ಟು ಆಹಾರದ ಧಾರಾಳತೆಯನ್ನು ಅವರ ಮುಂದೆ ಸುರಿಯುತ್ತಿದೆ. ಇದರಿಂದಾಗಿ ಈಗ ನಮ್ಮ ದೇಶದ ಜನರ ಆಕರ್ಷಣೆಯು ವಿಜ್ಞಾನದ ಉಪಾಸನೆಗೇ ಹರಿಯಲಾರಂಭಿಸಿದೆ. ಇನ್ನು ನಮ್ಮ ಹೊಸ ಜನಾಂಗಗಳಲ್ಲಿ ಅರ್ಚನೆ, ಹರಿಕತೆ, ಕೀರ್ತನೆ, ಭಜನೆ ಮುಂತಾದವುಗಳ ಮೂಲಕ ಮುಂಚಿನ ಕಾಲದ ಮಟ್ಟದಲ್ಲಿ ದೈವೀಭಕ್ತಿ ಉಂಟುಮಾಡುವುದು ಎಷ್ಟಕ್ಕೂ ಸಾಧ್ಯವಾಗಲಾರದೆಂದು ತೋರುತ್ತದೆ.

ಇದೇ ತರದ ಹೊಸ ಕಷ್ಟವು ಈಗ ಭೂಲೋಕದ ಇತರ ಎಲ್ಲಕಡೆಗಳಲ್ಲೂ ಕೂಡ ತೋರಿಕೊಂಡಿದೆ. ಏಕೆಂದರೆ ಭೂಲೋಕದ ಇತರ ಕಡೆಗಳ ಧರ್ಮಗಳೂ, ನಮ್ಮ ಭಕ್ತಿ ಪಂಥದ ಧರ್ಮಗಳಂತೆ ಜೀವರು ಬೇರೆ, ದೇವರು ಬೇರೆ, ಜೀವಾತ್ಮರು ದೇವರಿಗೆ ಶರಣುಹೋಗಿ ಭಕ್ತರಾಗಿ ಬಾಳುವುದು ಮಾತ್ರವೇ ಅತ್ಯುತ್ತಮ ದಾರಿ, ಅದಕ್ಕೆ ತಮ್ಮ ತಮ್ಮ ಮತದ ದೇವರು ಮಾತ್ರವೇ ಅತ್ಯುತ್ತಮ ಎಂದವರು. ಆದರೆ ಆ ಎಲ್ಲ ದೇಶಗಳಲ್ಲೂ ಕೂಡ ವಿಜ್ಞಾನದೇವರ ಪ್ರಿಯತೆಯೇ ವರ್ಧಿಸುತ್ತಿದ್ದು, ದೇವರ ಭಕ್ತಿಯನ್ನು ನಾಶಮಾಡುತ್ತಿದೆ. ಆದ್ದರಿಂದ ಈ ಕಾಲದಲ್ಲಿ ಧರ್ಮ ಉಳಿಸಲಿಕ್ಕೆ ಇಡೀ ಭೂಲೋಕಕ್ಕೇ ಅದರಲ್ಲಿ ಹೊಸ ಅಭಿರುಚಿ ಕೆರಳಿಸುವ ಒಂದು ಹೊಸ ಪಂಥ ಬೇಕಾಗಿದೆ.

ಈ ಹೊಸ ಪಂಥದ ಒಂದು ಮುಖ್ಯ ಲಕ್ಷಣ ಏನಿರಬೇಕೆಂದರೆ ಈ ಕಾಲದ ಜನರಲ್ಲಿ ತೀರಾ ಸಾಮಾನ್ಯವಾಗಿರುವ ಅವರ ತಾರ್ಕಿಕ ಲವಲವಿಕೆಗೆ ಚೆನ್ನಾಗಿ ಉತ್ತರ ಕೊಡಲಾಪ ಶಕ್ತಿ ಅದಕ್ಕಿರಬೇಕು. ಯಾವ ಹುಡುಗನೂ ಈ ಕಾಲದಲ್ಲಿ ಏಕೆ? ಏನು? ಹೇಗೆ? ಎಂದೆಲ್ಲ ಕೇಳದೆ ಯಾವ ಹೊಸ ಬೋಧನೆಯನ್ನೂ ಒಪ್ಪುವ ಕ್ರಮದವನಲ್ಲ. ಆದ್ದರಿಂದ ಈ ಹೊಸ ಧರ್ಮವು ಅತ್ಯಂತ ಹಿರಿಮೆಯ ತಾರ್ಕಿಕ ಪ್ರತಿಪಾದನೆಯಿಂದ ಈ ಕಾಲದ ಜನರ ಬಾಯಿ ಕಟ್ಟಿಸಿ ಬುದ್ಧಿಯ ಮಟ್ಟದಿಂದ ಒಪ್ಪ ಪಡೆಯುವ ತತ್ವಜ್ಞಾನವಾಗಿರಬೇಕು. ಶ್ರೀ ಶಂಕರಾಚಾರ್ಯರು ಪ್ರತಿಪಾದಿಸಿದ ರೀತಿಯ ಅದ್ವೈತ ವೇದಾಂತವು ಮಾತ್ರವೇ ಇಂಥ ಕೆಲಸವನ್ನು ಮುಂಚೆ ತಾರ್ಕಿಕಬುದ್ಧರೊಡನೆ ಮಾಡಿತ್ತು. ಈ ಕಾಲದಲ್ಲೂ ಅದು ಪುನಃ ಈ ಕೆಲಸವನ್ನು ಸಂಪೂರ್ಣ ಸಮರ್ಥತೆಯಿಂದ ಮಾಡಲಾಪುದು ಎಂಬುದನ್ನು ಸ್ವಾಮಿ ವಿವೇಕಾನಂದರು ಪಾಶ್ಚಾತ್ಯದೇಶಗಳ ಅತಿ ಸೂಕ್ಷ್ಮಬುದ್ಧಿಯ ತತ್ವಜ್ಞಾನಿಗಳೆದುರಲ್ಲೂ ತಮ್ಮ ಅದ್ವೈತ ವೇದಾಂತದ ಅತ್ಯಂತ ಸಮರ್ಥತೆಯ ಭಾಷಣಗಳಮೂಲಕ ರುಜು ಪಡಿ

ಸಿವರು. ಅಲ್ಲಿ ಈಗ ಅದ್ವೈತ ವೇದಾಂತವನ್ನು ಕಲಿಯುವವರು, ಅದನ್ನು ಮೆಚ್ಚಿ ತಮ್ಮ ಧಾರ್ಮಿಕ ಜೀವನದ ತಳಹದಿಯಾಗಿ ಮಾಡಿಕೊಂಡವರು, ಅನೇಕರಿದ್ದಾರೆ.

ಅದ್ವೈತವು ದೇವರಿಂದಲೇ ಬಂದ ವೇದಾಂತದ ಸಾರವಾದ್ದರಿಂದಲೇ ಅದನ್ನು ನಂಬಬೇಕೆಂಬ ಹಿಂದೂ ಭಾವನೆಗೆ ಪಾಶ್ಚಾತ್ಯರು ಬೆಲೆ ಕಟ್ಟಿದವರಲ್ಲ. ಆದರೆ ದೇವರ ಕೆಲಸ ಅತ್ಯಂತ ವಿಚಿತ್ರವಾದುದು. ಪಾಶ್ಚಾತ್ಯರು ಸಂಪೂರ್ಣ ನಂಬುವ ಯಾವ ವಿಜ್ಞಾನವು ಒಂದುಕಡೆಯಲ್ಲಿ ಧರ್ಮದಲ್ಲಿ ಶ್ರದ್ಧೆಯನ್ನು ನಾಶಮಾಡುತ್ತಿದೆಯೋ, ಆ ವಿಜ್ಞಾನವೇ ತನ್ನ ಒಂದು ಅತ್ಯಂತ ಮಹತ್ತ್ವದಾದ ಶೋಧನೆಯಿಂದ ಪಾಶ್ಚಾತ್ಯರಿಗೆ ಅದ್ವೈತದಲ್ಲಿ ಥಕ್ಕನೆ ಮತ್ತು ಧಾರಾಳವಾಗಿ ನಂಬಿಕೆ ಬರುವಂತೆಯೂ ಮಾಡಿದೆ! ಭೌತಿಕ ವಿಜ್ಞಾನದ ಮುಖ್ಯ ಕ್ಷೇತ್ರವು ವಿಶ್ವದಲ್ಲಿರುವ ಅ ಪ ರಿ ಮಿ ತ ತರದ ವಸ್ತುಗಳ ಶೋಧನೆ ನಡೆಸುವುದಾಗಿದೆ. ಈ ಶೋಧನೆಯನ್ನು ಅದು ನಡೆಸುತ್ತ ಹೋದಂತೆ, ಅವಲ್ಲಿ ನಿಜಕ್ಕೂ ಈ ಅಪಾರವಟ್ಟದ ವಿವಿಧತೆಯಿಲ್ಲ ಎಂಬುದು ವ್ಯಕ್ತವಾಗುತ್ತ ಬಂತು. ಕಟ್ಟಕಡೆಗೆ ಅದು ಕಂಡುಕೊಂಡಿರುವುದೇನನ್ನೆಂದರೆ, ಪ್ರತಿ ವಸ್ತುವೂ ಅಣುಗಳೆಂಬ ಅತ್ಯಂತ ಸೂಕ್ಷ್ಮ ಇಟ್ಟಿಗೆಗಳಿಂದ ಕಟ್ಟಲ್ಪಟ್ಟ ರಚನೆಗಳು. ಆದರೆ ಪ್ರತಿ ಅಣುವಿನಲ್ಲೂ ಇರುವುದು ಕೇವಲ ವಿದ್ಯುತ್ತು ಮಾತ್ರ! ಎಂದರೆ ಅತ್ಯಂತ ಭಿನ್ನತೆಯ ರೂಪ ಬಣ್ಣ ಭಾರ ಸ್ಥೂಲತೆ ಮು ಂ ತಾ ದ ಲಕ್ಷಣಗಳಿರುವ ವಿಶ್ವವು ಕೇವಲ ಕಣ್ಣಿಗೆ ಕಾಣದ, ಕೈಗೆ ಸಿಕ್ಕದ, ಗಂಧರೂಪ ರಹಿತವಾದ, ಕಲ್ಪನೆಗೆ ಕಷ್ಟವಾದ ಬ ಹು ಮ ಟ್ಟ ಗೆ ನಿರ್ಗುಣತರದ್ದಾದ ಶಕ್ತಿಯೊಂದರ ರಚನೆ, ಎಂದು ಅದು ರುಜು ಪಡಿಸಿದೆ!

ಇದು ಎಲ್ಲಾ ತರದ ಜಡವಸ್ತುಗಳಿಗೂ ಮೂಲವಾದರೆ, ಲೋಕದಲ್ಲಿರುವ ಕಾವು ಬೆಳಕು, ರೇಡಿಯೋ ತರಂಗ, ಕ್ಷಕಿರಣ, ಅಯಸ್ಕಾಂತ ಶಕ್ತಿ ಮುಂತಾದ ಹಲವು ತರದ ಶಕ್ತಿಗಳೂ ಕೂಡ ಒಂದರಿಂದ ಮತ್ತೊಂದಾಗಿ ಪರಿವರ್ತಿಸಲಾಪ ಒಂದೇ ಶಕ್ತಿ ಮೂಲದವು ಎಂದೂ ವಿಜ್ಞಾನವು ರುಜುಪಡಿಸಿದೆ.

ಇನ್ನು ನಮ್ಮ ಸುತ್ತಲಿರುವ ನಕ್ಷತ್ರಗಳೆಂಬ ಅಪಾರ ಸಂಖ್ಯೆಯ ಸೂರ್ಯಮಂಡಲಗಳ ಜ ಡ ಭಾ ಗ ವೂ ಅವಲ್ಲಿರುವ ಕಾವು ಬೆಳಕು ಮುಂತಾದ ಶಕ್ತಿಗಳೂ ಇಲ್ಲಿಯಂತೆಯೇ ಕೇವಲ ಒಂದೇಮೂಲದ ಶಕ್ತಿಯ ರೂಪಗಳು ಎಂದೂ ವಿಜ್ಞಾನಿಗಳು ರುಜುಪಡಿಸಿದ್ದಾರೆ. ಎಂದರೆ ಕೇವಲ ಒಂದು ಶಕ್ತಿಯಿಂದಲೇ ಇಡೀ ಅಪಾರ ವಿಶ್ವ ಉಂಟಾಯಿತು ಎಂಬ ವೇದಾಂತದ ಪ್ರತಿಪಾದನೆಗೆ ಹೀಗೆ ಅತ್ಯದ್ಭುತ ಬೆಂಬಲ ಸಿಕ್ಕಿದಂತಾಯಿತು

ವೇದಾಂತದ ಹೇಳಿಕೆಯಂತೆ ಆದಿಯಲ್ಲಿ ಬ್ರಹ್ಮವಲ್ಲದೆ ಮತ್ತೇನೇನೂ ಇರಲಿಲ್ಲ. ಸೃಷ್ಟಿಯೆಂಬ ಆಟ ನಡೆಸಲಿಕ್ಕೆಂದು ಅದು ಪ್ರಥಮತ ಆದಿಶಕ್ತಿಯನ್ನುಂಟು ಮಾಡಿತು

ಈ ಆದಿಶಕ್ತಿಯೇ ಇಡೀ ಜಡವಿಶ್ವವನ್ನುಂಟುಮಾಡಿದವಳು. ಮತ್ತು ಬ್ರಹ್ಮವು ಬೆಂಕಿಯಿಂದ ಕಿಡಿಗಳನ್ನು ಹೊರಡಿಸಿದಂತೆ ತನ್ನಿಂದಲೇ ಆತ್ಮರನ್ನು ಹೊರಡಿಸಿತು. ಆದಿಶಕ್ತಿಯು ಅವನ್ನು ತನ್ನ ಸೂಕ್ಷ್ಮವಾದ ಜಡ ಹೊದಿಕೆಗಳಿಂದ ಮುಚ್ಚಿ, ಬಂಧಿಸಿ ಅಲ್ಪತರದ ಜೀವಾತ್ಮರನ್ನಾಗಿ ಮಾಡಿದಳು. ವಿಶ್ವವೆಂಬ ರಂಗಸ್ಥಳದಲ್ಲಿ ಅವರಿಂದ ಆಟ ನಡೆಸುತ್ತಿದ್ದಾಳೆ. ಯಾವ ಜೀವಾತ್ಮನಾದರೂ ಧರ್ಮದ ದಾರಿಹಿಡಿದು ಕ್ರಮೇಣವಾಗಿ ಈ ಜಡ ಹೊದಿಕೆಯಬಂಧನ ಗೆದ್ದಾಗ ಪುನಃ ಬ್ರಹ್ಮದಲ್ಲೇ ಸಂಪೂರ್ಣವಾಗಿ ಲೀನನಾಗಿ ಬ್ರಹ್ಮವೇ ಆಗುತ್ತಾನೆ. ಆದರೆ ಇಡೀ ವಿಶ್ವಕ್ಕೆ ಕೇವಲವಾಗಿ ಒಂದೇ ಒಂದಾದ ಆದಿಶಕ್ತಿಯೇ ಮೂಲ ಎಂಬ ವೇದಾಂತದ ಪ್ರತಿಪಾದನೆಯನ್ನು ರುಜು ಮಾಡಿದ ವಿಜ್ಞಾನಕ್ಕೆ, ಜೀವಾತ್ಮರೆಲ್ಲರಿಗೂ ಬ್ರಹ್ಮವೆಂಬ ಒಂದೇಮೂಲ ಎಂಬುದನ್ನು ರುಜುಮಾಡಲು ಸಾಧ್ಯವೇಅಿಲ್ಲ ಎಂಬುದನ್ನು ಪಾಶ್ಚಾತ್ಯರು ಬಲ್ಲರು. ಏಕೆಂದರೆ ಆತ್ಮದ ವಿಚಾರ ಶೋಧನೆಗೆ ವಿಜ್ಞಾನಿಗೆ ಏನೂ ಸಮರ್ಥತೆಯಿಲ್ಲ. ಅದು ಅವನ ಶೋಧನೆಯ ಕ್ಷೇತ್ರವೇ ಅಲ್ಲ. ಅದರ ಶೋಧನೆಗೆ ಬೇಕಾದ ಚಿತ್ತಶುದ್ಧಿ ಮತ್ತು ಅಂತರ್ಮುಖತೆಯನ್ನು ಆಧ್ಯಾತ್ಮಿಕ ಮಹಾ ಪುರುಷರು ಮಾತ್ರ ಬೆಳೆಸಲಾಪರು. ಆದ್ದರಿಂದ ಪಾಶ್ಚಾತ್ಯರು ಈಭಾಗದ ಸತ್ಯತೆಯ ನಿರ್ಧಾರಕ್ಕೆ ವಿಜ್ಞಾನಿಯ ಶೋಧನೆಗೆ ಕಾಯುತ್ತಿಲ್ಲ. ಶಕ್ತಿ ಜಡ ವಿಶ್ವದ ಏಕಮಾತ್ರ ಮೂಲವೆಂಬ ಅತ್ಯದ್ಭುತ ಶೋಧನೆ ನಂಬಿದಮೇಲೆ ಬ್ರಹ್ಮವೆಂಬ ಜೀವಾತ್ಮರ ಏಕಮಾತ್ರ ಮೂಲವನ್ನೂ ಅವರು ನಿಜವಿರಬೇಕೆಂದೇ ಸ್ವೀಕರಿಸಿದ್ದಾರೆ. ವಿಜ್ಞಾನಿಯು ಈ ಶೋಧನೆಯ ಕಾಲದಲ್ಲೇ ಪಾಶ್ಚಾತ್ಯ ಮನೋಶಾಸ್ತ್ರದ ಪಂಡಿತರು ಧಾರ್ಮಿಕ ಮಹಾಪುರುಷರು ಮಾನಸಿಕ ಅನುಭವಗಳ ವಿಮರ್ಶೆಯನ್ನು ನಡೆಸಿದರು. ಈ ಧಾರ್ಮಿಕ ಮಹಾಪುರುಷರು ಬೇರೆ ಬೇರೆ ಧರ್ಮದ ಸಾಧನೆಗಳನ್ನು ಅವಲಂಬಿಸಿದವರಾಗಿದ್ದರೂ, ಅವರ ಆಧ್ಯಾತ್ಮಿಕ ಅನುಭವಗಳು ಬಹುಮಟ್ಟಿಗೆ ಒಂದೇತರದ್ದಿರುವ ಆಶ್ಚರ್ಯದ ಸಂಗತಿ ಆಗ ಅವರಿಗೆ ತಿಳದುಬಂತು. ಇದರ ಅರ್ಥವೇನು ?

ಮುಸುಲ್ಮಾನ ಧರ್ಮವು ಪ್ರತಿಪಾದಿಸುತ್ತವೆ, ಅದುಮಾತ್ರ ನಿಜವಾದ ಧರ್ಮ ಉಳಿದವೆಲ್ಲ ತಪ್ಪು; ಅವನ್ನು ದೇವರು ಮೆಚ್ಚುವುದಿಲ್ಲ; ಅವುಗಳ ಅಭ್ಯಾಸದಿಂದ ನರಕ ಮಾತ್ರ ಗತಿಎಂದು. ಕ್ರಿಶ್ಚನ್ ಧರ್ಮ, ಯಹೋವ ಧರ್ಮ, ಕೆಲವುಮಟ್ಟಿಗೆ ನಮ್ಮ ಹೊಸ ಆಚಾರ್ಯರ ಪಂಥಗಳು. ಈ ತರದ ಪ್ರತಿಪಾದನೆಯನ್ನೇ ಮಾಡಿವೆ ಕ್ರಿಶ್ಚನ್ ಧರ್ಮ ಮಾತ್ರವೇ ನಿಜಕ್ಕೂ ನಿಜವಾದ ಧರ್ಮವಾದರೆ, ಮುಸುಲ್ಮಾನ ಧರ್ಮ ತಪ್ಪು ಧರ್ಮವಾದರೆ, ಒಬ್ಬ ಅತ್ಯಂತ ಉತ್ತಮ ಕ್ರಿಶ್ಚನ್ ಸಾಧುವು ತನ್ನ ಸಾಧನೆಯಿಂದ ಮುಟ್ಟುವ ಶ್ರೇಷ್ಠ ಧಾರ್ಮಿಕ ಅನುಭವದ ಮಟ್ಟವನ್ನು ಒಬ್ಬ ಮುಸುಲ್ಮಾನ ಶ್ರೇಷ್ಠ ಸಾಧಕನು ಮುಸುಲ್ಮಾನ ಧರ್ಮದ ಸಾಧನೆಗಳಿಂದ ಎಷ್ಟಕ್ಕೂ ಮುಟ್ಟಲಾರನು ಎಂದಾಯಿತು. ಆದರೆ ನಿಜಕ್ಕೂ ಹೀಗಾಗದೆ, ಅವರ ಅನುಭವಗಳಲ್ಲಿ ಅತಿ ಧಾರಾಳ

ವಾದ ಹೋಲಿಕೆ ಇರುವುದೇ ಕಂಡುಬರುವುದರಿಂದ, ಈ ಎರಡು ಧರ್ಮಗಳಲ್ಲೂ ಏಕಮಾತ್ರ ಧಾರ್ಮಿಕ ನಿಜತ್ವವಿದೆ ಎಂದಾಯಿತು. ಅಂತೆಯೇ ಇತರ ಎಲ್ಲ ಧರ್ಮಗಳ ವಿಚಾರವೂ ಆಗುತ್ತದೆ. ಆದ್ದರಿಂದ ಈ ಎಲ್ಲ ವಿವಿಧತರದ ಮತಗಳನ್ನೂ ಪ್ರೇರಿಸಿದ ದೇವರು ಬೇರೆಬೇರೆ ಅಲ್ಲ. ಒಬ್ಬನೇ ಎಂದು ಒಪ್ಪಬೇಕಾಗುತ್ತದೆ.

ನಮ್ಮ ಜನ್ಮವು ಹಿಂದೂವಾಗಿಯೋ, ಕ್ರಿಶ್ಚನ್ ಆಗಿಯೋ, ಮುಸುಲ್ಮಾನ್ ಆಗಿಯೋ ಆಗುವಂತೆ ಮಾಡುವುದು ನಮ್ಮ ಕೈಯ್ಯಲ್ಲಿಲ್ಲ. ಆದ್ದರಿಂದ ಅದನ್ನು ದೇವರೇ ಮಾಡುತ್ತಾನೆಂದು ತೀರ್ಮಾನಿಸಬೇಕಾಗುತ್ತದೆ. ಆ ದೇವರು ತೀರಾ ನ್ಯಾಯಪರನೂ ಧರ್ಮಾತ್ಮನೂ ಆಗಿದ್ದಾನೆ ಎಂದು ಎಲ್ಲ ಧರ್ಮಗಳೂ ಸಾರುತ್ತಿವೆ ಎಂದಮೇಡೆ ಆ ದೇವರು ಒಬ್ಬನಿಗೆ ನಿಜತ್ವವಿರುವ ಧರ್ಮದ ಅಮೃತವನ್ನು ಮತ್ತೊಬ್ಬನಿಗೆ ತಪ್ಪುತರದ ನರಕಕ್ಕಿಳಿಸುವ ಹಾಳು ಧರ್ಮವನ್ನೂ ಹೇಗೆ ಕೊಟ್ಟಾನು? ಆದ್ದರಿಂದ ಜನರಿಗೆ ತಮ್ಮ ಜನ್ಮದಿಂದ ಸಿಕ್ಕುವ ಪ್ರತಿ ಧರ್ಮದಲ್ಲೂ ಅವರವರಿಗೆ ಜೀರ್ಣಿಸಲು ಸಾಧ್ಯವಾದ ಧಾರ್ಮಿಕ ನಿಜತ್ವಇದೆ ಎಂಬ ನಿರ್ಧಾರಕ್ಕೆ ಪಾಶ್ಚಾತ್ಯ ದೇಶಗಳ ಅನೇಕ ನಿಷ್ಪಕ್ಷಪಾತೀ ಮೇಧಾವಿಗಳು ಈಗ ಬಂದಿದ್ದಾರೆ.

ಅವರು ಈ ತರದ ನಿರ್ಧಾರಕ್ಕೆ ಬರುತ್ತಿರುವಾಗಲೇ ಇತರ ಎಲ್ಲಧರ್ಮಗಳೂ ತಮ್ಮ ದೇವರು, ತಮ್ಮ ಧರ್ಮ ಮಾತ್ರವೇ ನಿಜವೆಂದರೂ, ವೇದಾಂತವು ಮಾತ್ರವೇ ವಿಶ್ವದ ಎಲ್ಲ ಧರ್ಮಗಳೂ, ತರತರದ ಹೊಳೆಗಳಂತೆ, ಸಾಗರವೆಂಬ ಒಂದೇ ದೇವರಕಡೆಗೆ ಸಾಗುತ್ತಿರುವವು; ಯಾವ ದೇವರಿಗೆ ಮಣಿದರೂ, ಆ ಒಂದೇ ಒಂದಾದ ದೇವರಿಗೆ ಮಣಿದಂತೆ, ಯೆಂಬ ಅತ್ಯಂತ ವಿಶಾಲತೆಯ ಪ್ರತಿಪಾದನೆಯನ್ನು ಹಲವು ಸಾವಿರ ವರ್ಷಗಳಿಂದಲೂ ಮಾಡುತ್ತಿದ್ದ ವಿಚಾರವೂ, ಹಿಂದುಗಳು ಈ ಪ್ರತಿಪಾದನೆಯಂತೆ ತಮ್ಮ ದೇಶದಲ್ಲಿ ಯೆಲ್ಲ ಇತರ ಮತಗಳಿಗೂ ಆಶ್ರಯ ಕೊಟ್ಟುದೂ, ಅವುಗಳಬಗ್ಗೆ ಅತ್ಯಂತ ಹೆಚ್ಚಿನ ಉದಾರತೆ ತೋರಿಸುತ್ತಿದ್ದುದೂ ಪಾಶ್ಚಾತ್ಯದೇಶಗಳಲ್ಲಿ ಪ್ರಚಾರಕ್ಕೆ ಬಂತು ಆದ್ದರಿಂದ ಅವರಿಗೆ ಅದ್ವೈತ ವೇದಾಂತದ ಸತ್ಯತೆಯಬಗ್ಗೆ ಅಪಾರ ಗೌರವ ಉಂಟಾಯಿತು.

ಈ ಕಾಲದ ಇನ್ನೊಂದು ಘಟನೆಯೂ ಈ ಕಾಲದ ಪ್ರಪಂಚಕ್ಕೆ ಅದ್ವೈತ ವೇದಾಂತದ ಆವಶ್ಯಕತೆಯನ್ನು ಮೇಧಾವಿಗಳ ಗಮನಕ್ಕೆ ತರುವಂತೆ ಮಾಡಿತು ನಮ್ಮ ಲೋಕವು ಈಗ ಬಹುವಾಗಿ ಚಿಕ್ಕದಾಗಿದೆ ಅದರ ಅತ್ಯಂತ ದೂರದ ಊರೂ ಈಗ ಕೇವಲ ಒಂದು ದಿನದ ವಿಮಾನದ ಪ್ರಯಾಣದ ಹತ್ತಿರಕ್ಕೆ ಬಂದುಬಿಟ್ಟಿದೆ ಇದರಿಂದಾಗಿ ಎಲ್ಲೆಲ್ಲೂ ಹಲವು ಧರ್ಮದವರು, ನಾಗರಿಕತೆಯವರು, ಸಂಸ್ಕೃತಿಯವರು ಒಟ್ಟಾಗಿ ಬೆಳೆಯದೆ ಉಪಾಯವಿಲ್ಲವಾಗಿದೆ ಅವರು ತಮ್ಮ ತಮ್ಮ ಧರ್ಮ ಮಾತ್ರವೇ ಸತ್ಯ, ಇತರ ಧರ್ಮಗಳನ್ನು ಅಭ್ಯಾಸ ಮಾಡುವವರು ಕಾಫರರು. ಅವ

ರನ್ನು ಕೊಂದರೆ ಪುಣ್ಯಬರುತ್ತದೆ; ಎನ್ನುವ ವಿಪರೀತ ಅಸಹನೀಯತೆಗೆ ಇನ್ನು ಲೋಕದಲ್ಲಿ ಆಸ್ಪದವೇ ಇರಕೂಡದು, ಎಂಬ ಭಾವನೆ ನಿಧಾನವಾಗಿ ಸರ್ವತ್ರವಾಗಿ ಹಬ್ಬುತ್ತಿದೆ. ಜನರು ಅವರವರ ದೇವರಾದ ಕೃಷ್ಣನನ್ನು, ಅಲ್ಲಾನನ್ನು, ಕ್ರೈಸ್ತನನ್ನು ಮುಂತಾಗಿ ನಂಬುವದು ತೀರಾ ನ್ಯಾಯುವೇ. ಆದರೆ ಸಾಗರದ ರೂಪರಹಿತವಾದ ನೀರಿಂದ ಹಲವು ರೂಪಗಳ ಹಿಮದ ಗಡ್ಡೆಗಳುಂಟಾದಂತೆ ಎಲ್ಲ ಧರ್ಮಗಳ ತಮ್ಮದೇ ಆದ ಪ್ರತ್ಯೇಕತೆಯಿರುವ ದೇವರುಗಳಿಗೆಲ್ಲ ಮೂಲನಾದ ದೇವರೊಬ್ಬನಿದ್ದಾನೆಂದು ಯೆಲ್ಲ ಧರ್ಮದವರೂ ಭಾವಿಸುವದು ಅಗತ್ಯ; ಅವನು ಯಾವ ಧರ್ಮದ ಏಕಮಾತ್ರ ಸತ್ಯನೆಂಬ ವೇವರೂ ಅಲ್ಲ; ಅವರಿಗೆ ಅತೀತನಾದವ; ಯೆಂಬ ಭಾವನೆ ಲೋಕದಲ್ಲಿ ಬೆಳೆಯುತ್ತಿದೆ ಆದರೆ ಯಾವ ಇತರಧರ್ಮವೂ ಅಂಥ ಮೂಲದೇವರ ಪ್ರತಿಪಾದನೆ ಮಾಡಿದ್ದಿಲ್ಲ. ಅದ್ವೈತ ವೇದಾಂತಮಾತ್ರವೇ ಅಂಥ ದೇವರ ಪ್ರತಿಪಾದನೆಯನ್ನು ತೀರಾ ಸಮಂಜಸವಾಗುವ ರೀತಿಯಲ್ಲಿ ಮಾಡಿದ್ದೂ ಪಾಶ್ಚಾತ್ಯರನ್ನು ತುಂಬಾ ಬೆರಗುಮಾಡಿದೆ.

ನಮ್ಮ ವೇದಾಂತವು ಆ ದೇವರನ್ನು ಬ್ರಹ್ಮವೆಂದು ಕರೆದು, ಅದು ಗಂಡೂ ಅಲ್ಲ ಹೆಣ್ಣೂ ಅಲ್ಲ, ಸರ್ವಗುಣ ಸಂಪನ್ನಯೆಂದುಕೂಡ ಕರೆಯಲಾಗದ ಯೆಲ್ಲ ಗುಣಗಳನ್ನೂ ಮೀರುವ ಗುಣಾತೀತವಾದ, ದೇವರುಯೆಂದು ಹೇಳಿದೆ. ಯಾವುದಾದರೊಂದು ಗುಣವನ್ನು ಸೂಚಿಸಿ, ಆ ದೇವರು ಅದು, ಎಂದೊಡನೆ ಆ ದೇವರಲ್ಲಿ ಆದರ ವಿರುದ್ಧಗುಣಕ್ಕೆ ಆಸ್ಪದವಿಲ್ಲದ ಅಪೂರ್ಣತೆ ಬರುತ್ತದಾದ್ದರಿಂದ ಅದು ಕೇವಲ ನಿರ್ಗುಣವಾದುದುಯೆಂದು ಪ್ರತಿಪಾದಿಸಿದೆ. ಎಲ್ಲ ಧರ್ಮಗಳ ದೇವರಿಗಳಿಗೂ ಮೂಲವಾಗಬೇಕಾದ ಈ ದೇವರ ಇಷ್ಟು ಕಾರಣಯುಕ್ತವಾದ ಪ್ರತಿಪಾದನೆಯು ವೇದಾಂತದಲ್ಲಿ ಇದ್ದುದು ಕಂಡು, ತುಂಬಾ ಮೆಚ್ಚಿ ಈಕಾಲಕ್ಕೆ ಅದ್ವೈತ ವೇದಾಂತವು ಭೂಲೋಕದಲ್ಲೇ ಎಲ್ಲರಿಂದಲೂ ಒಪ್ಪಲ್ಪಡಬೇಕಾದ ಏಕಮಾತ್ರ ಸಹಾಯಕ ಧರ್ಮಯೆಂದು ಅನೇಕ ಮೇಧಾವಿಗಳು ಈಗ ತೀರ್ಮಾನಿಸುವಂತಾಗಿದೆ

ಪ್ರತಿಯೊಂದು ದೇಶಕ್ಕು ಆದರ ವಿಶೇಷತೆ ಯಿದೆ. ಹಿಂದೂದೇಶದ ವಿಶೇಷತೆ ಯಾವುದೆಂದರೆ ಆದರ ಧಾರ್ಮಿಕ ಜೀವನ. ಅದು ಮುಂದೆ ಇಡೀ ಭೂಲೋಕಕ್ಕೇ ತನ್ನ ಧಾರ್ಮಿಕ ಬೆಳಕನ್ನು ಬೀರಬೇಕಾಗಿದೆ, ಎಂದು ಸ್ವಾಮಿ ವಿವೇಕಾನಂದರು ಸಾರಿದ್ದರು. ಅದ್ವೈತ ವೇದಾಂತವು ವಿಶ್ವಕ್ಕೇ ಬೇಕಾದ ಅದ್ವಿತೀಯ ಮಟ್ಟದ ಏಕಮಾತ್ರ ತತ್ವವೆಂದು ಭೂಲೋಕದ ಅನೇಕಾನೇಕ ಮೇಧಾವಿಗಳಗೆ ತೋರುವಂತಾದುದು, ಸ್ವಾಮಿ ವಿವೇಕಾನಂದರ ಭವಿಷ್ಯ ವಾಣಿಯ ಪ್ರಥಮ ನಿದರ್ಶನ ಆದರೆ ಲೋಕದಲ್ಲಿ ಎಲ್ಲಿಕಂಡರೂ ಜನರು ಧರ್ಮವನ್ನು ಧಿಕ್ಕರಿಸುತ್ತಿರುವಾಗ ಈ ವೇದಾಂತವು ಜನಸಾಮಾನ್ಯರಲ್ಲಿ ಹರಡುವುದು ತೀರಾ ಅಸಂಭವವಲ್ಲವೇ ಎಂಬ ಸಂಶಯ ಬಂದೀತು

ಆದರೆ ದೇವರಿಗೆ ಯಾವುದೂ ಅಸಾಧ್ಯವಲ್ಲ. ಮಾರ್ಕ್ಸನ ಕಮ್ಯೂನಿಸ್ಟ್ ತತ್ವವು ಭೂಲೋಕದ ಮೂರನೇ ಒಂದಂಶದ ಜನರಲ್ಲೀಗ ಹಬ್ಬಿ ಸ್ವೀಕೃತವಾಗಿದೆ ನಮ್ಮ ದೇಶದ ಪ್ರತಿಭಾಗದಲ್ಲೂ ಕೂಡ ಅದರಿಂದ ಪ್ರೇರಿತರಾದ ಜನರು ಅದಕ್ಕಾಗಿ ತಮ್ಮ ಜೀವನದಲ್ಲಿ ತ್ಯಾಗ ಮತ್ತು ಶಿಸ್ತು ಪ್ರದರ್ಶಿಸುವುದನ್ನು ಕಾಣುತೇವೆ. ಕಲಿಯುಗ ದಲ್ಲಿ ಕೆಟ್ಟದ್ದು ಹರಡುವುದು ಸುಲಭ. ಆದರೆ ಹಲವು ದೃಷ್ಟಿಗಳಿಂದ ಕಂಡಾಗಲೂ ಅದ್ವೈತವು ಈ ಹೊಸ ಯುಗಕ್ಕೆ ಅವಶ್ಯಕವಾದುದು ಎಂದು ತೋರಲಾರಂಭಿಸಿದುದೇ ಅದು ಕ್ರಮೇಣವಾಗಿಯಾದರೂ ಭೂಲೋಕದಲ್ಲೆಲ್ಲ ಹರಡೀತು. ಜನರ ಜೀವನದ ಮೇಲೆ ತನ್ನ ಅಪ್ರತಿಮ ಪ್ರಭಾವ ಬೀರೀತು; ಅವರನ್ನು ಕ್ರಮೇಣವಾಗಿ ತಿದ್ದೀತು; ಎಂದು ಊಹಿಸಲು ಆಸ್ಪದವಿದೆ. ಶ್ರೀರಾಮಕೃಷ್ಣ ಪರಮಹಂಸರು ಒಮ್ಮೆ ಹೇಳಿ ದ್ದರು - ಕ್ರಮೇಣವಾಗಿ ಈ ಕಾಲದ ಎಲ್ಲ ಅಲ್ಪತರದ ಧರ್ಮಗಳೂ ನಾಶವಾಗಿ ಶಾಶ್ವ ತವಾದ ಸನಾತನ ಧರ್ಮಮಾತ್ರ ಉಳಿದೀತು ಎಂದು. ಇದು ಎಲ್ಲ ಅದ್ವೈತಿಗಳನ್ನೂ ಹಿಂದುಗಳನ್ನೂ ತುಂಬಾ ಸಂತೋಷಪಡಿಸಬೇಕಾದ ವಿಚಾರವಾಗಿದೆ; ನಾವೆಲ್ಲ ತುಂಬಾ ಹೆಮ್ಮೆ ಪಡಬೇಕಾದ ವಿಷಯವಾಗಿದೆ.

ಹೀಗೆ ವೇದಾಂತವು ಮುಂದೆ ಇಡೀ ಭೂಲೋಕವನ್ನೇ ಹಬ್ಬಬಹುದಾದರೂ ಅದರ ಅತ್ಯುತ್ತಮತರದ, ಭದ್ರವಾದತರದ, ಅಭ್ಯಾಸಕ್ಕೆ ಅನುಕೂಲತೆ ಇರುವುದು ಕೇವಲ ಭಾರತದಲ್ಲಿಮಾತ್ರ ಎನ್ನುತ್ತದೆ ನಮ್ಮ ಶಾಸ್ತ್ರ. ಭಾರತದ ವರ್ಣಧರ್ಮದ ಆಚಾರಗಳ ಮೂಲಕ ಮಾತ್ರ. ಇದು ಮಾತ್ರವೇ ಸರಿಯಾದ ತರಬೇತಿ ಕೊಡುವ ವಿಶ್ವವಿದ್ಯಾಲಯದಲ್ಲಿ ಕಲಿಯುತ್ತ ತನ್ನಮಟ್ಟ ಬೆಳೆಸಲಾಪ ವಿದ್ಯಾರ್ಥಿಗಿರುವ ಸೌಕರ್ಯದಂತೆ ಇದೆ. ಪರದೇಶಗಳಲ್ಲಿ ಅಧ್ಯಾತ್ಮದ ಸಾಧನೆ ನಡೆಸುವುದೆಂದರೆ ಸ್ವಂತವಾಗಿ ಅತ್ಯಂತ ಶ್ರಮದಿಂದ ಕಲಿತು ಎಂ. ಎ. ಪರೀಕ್ಷೆಗೆ ಕುಳಿತಂತೆ ಆದ್ದರಿಂದ ಪ್ರತಿಯೊಬ್ಬ ಶ್ರೌತಸ್ಮಾರ್ತ ಸಂಪ್ರದಾಯದವನೂ ತನ್ನ ಜನ್ಮಗತ ಬಂದ ಭಾಗ್ಯ ಕ್ಕಾಗಿ ತುಂಬಾ ಸಂತೋಷಪಟ್ಟು ಅವುಗಳ ಆಚರಣೆ ಕಷ್ಟವಾದರೂ ಕ್ರಮಬದ್ಧ ವಾಗಿ ನಡೆಸಿ ತಮ್ಮ ಜನ್ಮದ ಸಾಧ್ಯಕತೆಗಳಿಸಬೇಕು. ಜಗದ್ಗುರು ಶ್ರೀ ಶಂಕರಾ ಚಾರ್ಯರು ಅದಕ್ಕೆ ನಮ್ಮನ್ನು ಸತತಪ್ರೇರಿಸುವಂತಾಗಲಿ !



ಮಂಗಳಂ ದೇಶಿಕೇಂದ್ರಾಯ ಮಹನೀಯ ಗುಣಾತ್ಮನೇ ।
ಈಶ್ವರಸ್ಯಾವತಾರಾಯ ಶಂಕರಾರ್ಯಾಯ ಮಂಗಳಂ ॥

ಶುಭಂ.

ಶಾರದಾ ಪ್ರಿಂಟರ್ಸ್, ಹೊಸಪೇಟೆ.

